**ಪದ—(ಶ್ರೀವರನೆ . . . ಎಂಬಂತೆ) ತ್ರಿವಟ ತಾಳ.**

**ಏನಿದುವು ವಿಪರಿತವಗ್ಯೆವಿರ್ಪೆ ॥ ಯೋಚಿಸು ಪ್ರಿಯಾ ಗೈದಿಹ ಆಣೆಯ ।**
**ಅನುದಿನವೆನ್ನ-ಪ್ರಾಣದ ॥ ತ್ಯಜಿಸು ಪಾನವಾ-ಪಾದಕೆ ಬೀಳುವೆ ।**
**ಸಲ್ಲಿಸು ಪ್ರಾರ್ಥನೆ ನಾಥನೆ ॥ ೧ ॥**

ದೇವಾ, ನಿಮ್ಮ ಬೆಳಗ್ಗಿನ ದೃಢ ಪ್ರತಿಜ್ಞೆಯೆಲ್ಲಿ?

ಸುರೇಂದ್ರ:—ರಮಾ, ಕ್ಷಮಿಸು, ನನ್ನ ಕೈಬಿಡು, ನಾಳೆಯಿಂದ ನಿಜವಾಗಿಯೂ ಬಿಟ್ಟೆ. ಬಿಟ್ಟೇಬಿಟ್ಟೆ! ಇಂದು ಕಿಂಚಿತ್ ಮಾತ್ರ, ಕೊನೆಯ ಸಲ, ಕಿಂಚಿತ್ ಕಿಂಚಿತ್ ಮಾತ್ರ! ತಡೆಯಬೇಡ ರಮಾ, ಬರೇ ಒಂದೇ ಒಂದು ಗುಟುಕು!

ರಮೆ:—(ದುಃಖಿಸುತ್ತ) ನನ್ನ ಜೀವನ ಸರ್ವಸ್ವ! ದಿನಾಲೂ ಇದೇ ಹಾಡು! ನಾಳೆ ನಾಳೆಯೆಂದು ಈ ಅವಸ್ಥೆಗೆ ಬಂದಿರಿ! ಬಂದ ಕಕ್ಷೀಗಾರ ರನ್ನು ಮತ್ತರಾಗಿ ಓಡಿಸತೊಡಗಿದಿರಿ! ಇನ್ನೂ ಇನ್ನೂ 'ನಾಳೆ' ಎನ್ನು ವಿರಾ? ಬೇಡ, ಸುಳ್ಳು ಹೇಳಬೇಡಿರಿ. ನನ್ನನ್ನು ಕೊಂದುಬಿಡಿರಿ. ಅನಂತರ ಎಷ್ಟು ಬೇಕಾದರೂ ಕುಡಿಯಿರಿ. ನಿಮ್ಮನ್ನು ತಡೆಯುವವರಾರೂ ಇಲ್ಲ

**ಪದ—(ಹಾ ವಿಧಿವಿಧಿ . . . ಎಂಬಂತೆ) ಪಂಜಾಬಿ ತಾಳ.**

**ಹಾ, ಬಿಡುಬಿಡು ಮಮ ಪ್ರಿಯರಮಣನೆ ।**
**ಈ ತೆರದಿಂದ-ಮದ್ಯವ ಸೇವಿಸೆ ।**
**ಸುಕೀರ್ತಿಯ ಹಾನಿ ಬಾರದೇನೈ ।**
**ತಿಳಿಯೆಯೆಂತಕಟ । ಮದ್ಯದ ವಿಕಟ । ಫಲದ ಸಂಕಟ ।**
**ವೆಂತು ಸಹಿಸಲಯ್ಯೊ ॥ ೧ ॥**

ಸುರೇಂದ್ರ:—ರಮಾ, ನಿನ್ನನ್ನು ಕೊಂದೂ ನನಗೆ ಇದು ಬೇಕಾಗಿದೆಯೆ?

ರಮಾ:—ಹಾಗಾದರೆ ಅದನ್ನು ಬಿಡಲೇಬೇಕು. ನಾನು ಈ ಗ್ಲಾಸನ್ನೂ ಬಾಟ್ಲಿಯನ್ನೂ ಈಗಲೇ ಒಡೆದು ಹಾಕುವೆನು (ಎನ್ನುತ್ತ ಅವುಗಳನ್ನು ತೆಗೆಯಲು ಹೋಗುವಳು.)

ಸುರೇಂದ್ರ:—(ರಮೆಯನ್ನು ತಡೆದು) ರಮಾ, ಒಡೆದು ಹಾಕಬೇಡ, ನಾಳೆಯಿಂದ ಅದನ್ನು ಮುಟ್ಟುವುದೇ ಇಲ್ಲ. ನೋಡು, ಮುಟ್ಟುವುದೇ

ಇಲ್ಲ. ಇಂದು ಮಾತ್ರ, ಕೊನೆಯ ಸರ್ತಿ, ಒಂದೇ ಒಂದು ಗುಟುಕು, ಕೋಪಿಸಬೇಡ, ತಡೆಯಬೇಡ, ಅಂಗಲಾಚಿ ಬೇಡಿಕೊಳ್ಳುತ್ತೇನೆ.

ರಮೆ:—ನಾನು ಎಷ್ಟು ಬೇಡಿಕೊಂಡರೂ ನೀವು ಕೇಳುವುದಿಲ್ಲ ವಲ್ಲವೆ? ನೀವು ಕುಡಿಯುವುದನ್ನು ನಾನು ನೋಡಲಾರೆ, ನಾನಿಲ್ಲಿ ನಿಲ್ಲ ಲಾರೆ. ಅದು ನನ್ನ ರಕ್ತಕ್ಕೆ ಸಮ. ಕುಡಿಯುವುದಾದರೆ ಕುಡಿಯಿರಿ! (ಎನ್ನುತ್ತ ಸಿಟ್ಟುಗೊಂಡು ಹೋಗುವಳು. ಸುರೇಂದ್ರನು ಆಕೆಯು ಎಲ್ಲಾದರೂ ಪುನಃ ಬರು ವಳೋ ಎಂದು ನೋಡುತ್ತ ನೋಡುತ್ತ ಕುಡಿಯುತ್ತಿರುವನು. ಪರದೆಯು ಬೀಳುವುದು.)

---

## ದೃಶ್ಯ ೩.

(ಬೀದಿಯಲ್ಲಿ ಮುದಿ ಬ್ರಾಹ್ಮಣನೊಬ್ಬನು ಹೋಗುತ್ತಿರುವನು. ಹಿಂದಿನಿಂದ ವೆಕ್ಸಿನೇಟರ್ ಬರುವನು).

ವೆಕ್ಸಿನೇಟರ್:—ಅಯ್ಯಾ, ಸ್ವಾಮಿ, ನಿಲ್ಲಿ.

ಮುದುಕ:—ಯಾರಪ್ಪ! ಏನು! ನೀವ್ಯಾರು?

ವೆಕ್ಸಿನೇಟರ್:—ನಾನೊಬ್ಬ ವೆಕ್ಸಿನೇಟ್ರು.

(ಕಿವಿ ಸರಿಯಾಗಿ ಕೇಳದ ಮುದುಕನು ಇನ್ಸ್ಪೆಕ್ಟರು ಎಂತ ತಿಳಿದು ಗಡಗಡನೆ ನಡುಗುತ್ತ)

ಮುದುಕ:—ಏನು! ಇನ್ಸ್ಪೆಟ್ರ? ಪೋಲೀಸು ಇನ್ಸ್ಪೆಟ್ರ? ಅಯ್ಯೋ! ನಾನು ಬಡವ, ಮುದುಕ, ಸ್ಮಶಾನ ಯಾತ್ರೆಗೆ ಹೊರಟವ! ಪ್ರಾಯ ಕಾಲದಲ್ಲೂ ಅನ್ಯಾಯ ಮಾಡಿದವನಲ್ಲ—ಈಗ ಹೊಳೆಗೆ ಬಾಗಿದ ಮರ, ಅಯ್ಯೋ, ಸಾಯುವ ಕಾಲಕ್ಕೆ ನನಗೆ ಜೈಲು! ಯಾಕಪ್ಪ! ನಾನು ನಿರಪ ರಾಧಿ! ನಿರಪರಾಧಿ! ತಾವು ಧರ್ಮಾವತಾರರು, ಚೆನ್ನಾಗಿ ಪರಾಂಬರಿಸ ಬೇಕು; ಯಾರೋ ಪೋಕಾಟಿಗೆ ಜನರು ನನ್ನ ಮೇಲೆ ಸುಳ್ಳು ತಕ್ಷೀರು ತಂದಿರಬಹುದು.

ವೆಕ್ಸಿನೇಟರ್:—ಹೆದರ ಬೇಡಿರಿ ಸ್ವಾಮೀ, ನಾನು ಪೋಲೀಸು ಇನ್ಸ್ಪೆಕ್ಟ್ರು ಅಲ್ಲ.

ಮುದುಕ:—ಏನು? ಅಲ್ಲವೆ? ಪೋಲೀಸು ಇನ್ಸ್ಪೆಕ್ಟ್ರು ಅಲ್ಲವೆ?

**ವೆಕ್ಸಿನೇಟರ್**:— ಅಲ್ಲ; ನಿಜವಾಗಿಯೂ ಅಲ್ಲ.

**ಮುದುಕ**:—ಅಬ್ಬಬ್ಬ! ಒಮ್ಮೆಗೆ ಹಾರಿಹೋದ ಪ್ರಾಣ ಬಂತು! ಅಯ್ಯಾ ಎಲ್ಲಾ ಮಾತಾಡೋಣ—ಸ್ವಲ್ಪ ಉಸುರು ತೆಗೆದುಕೊಳ್ಳುತ್ತೇನೆ —ಬಹಳ ಗಾಬರಿ ಬಿದ್ದು ಬಿಟ್ಟೆ ನೋಡಿ; ಪ್ರಾಣ ಹಾರಿಹೋಗದೆ ಇದ್ದ ದ್ದು ಪುಣ್ಯ! ಕೆಲವು ಪೋಲೀಸಿನವರು ಹಾಗೆ ಮಾಡಿಬಿಡ್ತಾರಂತೆ ಸ್ವಾಮಿ; ಅಪರಾಧಿಗಳನ್ನು ಬಿಟ್ಟು ನಮ್ಮಂತಹ ಬಡವರನ್ನು ಕೈದುಮಾಡಿಕೊಂಡು ಹೋಗಿ ಬಿಡುತ್ತಾರಂತ ಕೇಳಿದ್ದೆ. ಆದ್ರಿಂದ ಇನ್ಸ್‌ಪೆಟ್ರು—ಪೊಲಿಸ್ ಇನ್ಸ್‌ಪೆಟ್ರು ಎಂದ ಕೂಡಲೆ ನನ್ನ ಮೈ ಗಡಗಡಗಡ—ಗಡಗಡಗಡಗಡ ಗಡಗಡಗಡ--ಗಡಾಯಮಾನವಾಯಿತು! ಎಡೆ ಬಡಬಡಬಡ, ಬಡಬಡ, ಬಡಬಡ, ಬಡ, ಎನ್ನುವ ಹಾಗಾಯಿತು ನೋಡಿ. ನೀವು ಇನ್ಸ್‌ಪೆಕ್ಟ್ರು ಅಲ್ಲ ಎಂತ ಹೇಳುವುದು ಇನ್ನು ತುಸ ತಡವಾಗುತ್ತಿದ್ದರೆ ನನ್ನ ಹೆಣ ನಿಮ್ಮ ಪಾದದ ಬಳಿ ಬೀಳುತ್ತಿತ್ತು—ಏನೋ—ಆಂ—ಏನಂದ್ರಿ? ನೀವು ಪೋಲೀಸು ಇನ್ಸ್‌ಪೆಕ್ಟ್ರು ಅಲ್ಲ? ಮತ್ತೇನೆಂದಿರಿ? ನೀವು ಯಾರು?

**ವೆಕ್ಸಿನೇಟರ್**:—ನಾನು ವೆಕ್ಸಿನೇಟರ್--ವೆಕ್ಸಿನೇಶನ್ ಮಾಡುವವ?

**ಮುದುಕ**:—ಏನು! ವಕ್ಷನಾಶನ ಮಾಡುವವರೆ? ವಕ್ಷನಾಶ ಮಾಡಿದರೆ ಮತ್ತೆ ಬಾಳುವುದು ಹೇಗೆ ಸ್ವಾಮಿ?

**ವೆಕ್ಸಿನೇಟರ್**:—ಅದಲ್ಲ ಸ್ವಾಮಿ, ನಾನು ದಾಕ್ತಾರ್.

**ಮುದುಕ**: —ಅಯ್ಯೋ! ಹುಲಿಯ ಬಾಯಿಯಿಂದ ಸಿಂಹದ ಬಾಯಿಗೆ! ಇನ್ನೇನು! ನನ್ನನ್ನು ಜೀವವಿದ್ದಂತೆ ಅಡ್ಡ ನೀಟ ಕೊಯ್ಯಬೇಕೆ? ನನಗೇನೂ ರೋಗವಿಲ್ಲ, ದಮ್ಮಯ್ಯ, ನನ್ನನ್ನು ಬಿಟ್ಟುಬಿಡಿ! ನನ್ನ ದಾರಿ ಹಿಡಕೊಂಡು ಹೋಗಿಬಿಡುತ್ತೇನೆ.

**ವೆಕ್ಸಿನೇಟರ್**:—ಅಲ್ಲ ಸ್ವಾಮಿ! ಅಂಥ ಡಾಕ್ಟರ್ ಅಲ್ಲ. ಸುಮ್ಮನೆ ಗಾಬರಿಯಾಗಬೇಡಿರಿ. ನಾನು ದಾಕು ಹಾಕುವವ. ನಿಮಗೂ ದಾಕು ಹಾಕಲೆ?

**ಮುದುಕ**:—ಯಾಕಪ್ಪಾ ದಾಕು? ಅದರಿಂದೇನಾಗುವುದು?

ವೆಕ್ಸಿನೇಟರ್:—ನೋಡಿರಿ, ಊರಲ್ಲೆಲ್ಲ ಸಿಡುಬು ರೋಗ ಹರಡ ತೊಡಗಿದೆ. ಅನೇಕರು ಸಾಯುತ್ತಾರೆ. ಆದುದರಿಂದ ಬೀದಿ ಬೀದಿ ತಿರುಗಿ ಜನರು ದಾಕು ಹಾಕಿಸಿಕೊಳ್ಳುವಂತೆ ನಾವು ಉಪದೇಶ ಮಾಡುತ್ತಿದ್ದೇವೆ.

ಮುದುಕ:—ಅದರಿಂದಲೇ ಸಾವು ಎಂತ ಬ್ರಹ್ಮ ಬರೆದಿದ್ದರೆ ನಿಮ್ಮ ಡಾಕುಗೀಕಿನಿಂದ ತಡೆಯಲಿಕ್ಕಾಗುತ್ತದೆಯೆ? ನಾವು ಪೂರ್ವ ಜನ್ಮದಲ್ಲಿ ಮಾಡಿದ ಕರ್ಮದ ಫಲ ಈ ಜನ್ಮದಲ್ಲಿ ಅನುಭವಿಸಲೇ ಬೇಕು. ತಪ್ಪಿಸಲಿಕ್ಕೆ ಯಾರಿಗೆ ಸಾಧ್ಯ ಸ್ವಾಮಿ?

ವೆಕ್ಸಿನೇಟರ್:—ಆ ಮಾತು ಆತ್ಮೋನ್ನತಿಯ ವಿಷಯದಲ್ಲಿ ಸರಿ ಇರಬಹುದು. ಶರೀರ ಧರ್ಮಶಾಸ್ತ್ರ ಪ್ರಕಾರ ಹಾಗಲ್ಲ ನೋಡಿ—ದೇಹ ಧರ್ಮಶಾಸ್ತ್ರಕ್ಕೆ ವಿರುದ್ಧವಾಗಿ ನಡೆದುದರ ಫಲವನ್ನು ದೇಹವೇ ಅನುಭವಿಸಬೇಕು. ಇದೇ ಜನ್ಮದಲ್ಲಿ ಅನುಭವಿಸಲೇ ಬೇಕು. ಶರೀರ ಶಾಸ್ತ್ರ ಪ್ರಕಾರ ನಾವು ಅನುಸರಿಸತಕ್ಕ ಕೆಲವು ನಿಯಮಗಳಿವೆ—ನೋಡಿ, ರಾತ್ರೆ ನಿದ್ದೆ ಮಾಡಬೇಕೆಂಬುದೊಂದು ನಿಯಮ—ಈ ನಿಯಮವನ್ನು ಎರಡು ದಿನ ಉಲ್ಲಂಘಿಸಿ ನೋಡಿರಿ ಅದರ ಫಲ ಕೂಡಲೇ ಈ ಜನ್ಮದಲ್ಲೇ ಬಂತೇ ಬಂತು! ಇನ್ನು ಮಿತ ತಪ್ಪಿ ಊಟಮಾಡಬಾರದೆಂಬುದು ಮತ್ತೊಂದು ನಿಯಮ. ಇದನ್ನು ಮೀರಿದರೆ ಕೂಡಲೇ ನಿಮಗೆ ಅಜೀರ್ಣ ಅತಿಸಾರಾದಿ ರೂಪದಲ್ಲಿ ಶಿಕ್ಷೆ ಬಂದೇ ಬರುವುದು. ಈ ರೀತಿ ಶರೀರ ಧರ್ಮಕ್ಕೆ ವಿರುದ್ಧವಾಗಿ ವರ್ತಿಸಿ ಮಾಡುವ ಪಾಪಕ್ಕೆಲ್ಲ ಈ ಜನ್ಮದಲ್ಲೆ ಕ್ಷಿಪ್ರದಲ್ಲೇ ಕಠಿಣ ಫಲವನ್ನು ನಾವು ಅನುಭವಿಸುತ್ತೇವೆ. ಆದುದರಿಂದ ರೋಗ ರುಜೆಗಳೆಲ್ಲ ಬರುವುದು ಪೂರ್ವ ಜನ್ಮದ ಕರ್ಮಫಲದಿಂದಲ್ಲ. ಈ ಜನ್ಮದಲ್ಲೇ ನಾವು ಆರೋಗ್ಯ ಶಾಸ್ತ್ರದ ನಿಯಮಕ್ಕೆ ವಿರುದ್ಧವಾಗಿ ಮಾಡಿದ ಯಾವುದೋ ಒಂದು ಕರ್ಮದ ಫಲವಾಗಿ ನಮಗೆ ವ್ಯಾಧಿಗಳು ಬರುವವು. ನಾವು ಅಂತಹ ನಿಯಮಗಳನ್ನು ತಿಳಕೊಂಡು ಅವುಗಳನ್ನು ಮೀರದಂತೆ ಜಾಗ್ರತೆಯಿಂದಿದ್ದರೆ ನಮಗೆ ವ್ಯಾಧಿಗಳು ಬರಲಾರವು. ಸಿಡುಬಿನ ವಿಷಯವೂ ಅಂತೆಯೇ. ಹಣೆಯಲ್ಲಿ ಬರದ್ದಾಗುತ್ತದೆಂದು ಬೆಂಕಿಯ ಮೇಲೆ ಹಾರುವುದೆ? ವಿಷವನ್ನು ತಿನ್ನುವುದೆ? ನೋಡಿ, ದಾಕು ಹಾಕಿಸಿಕೊಂಡು

ಬಿಟ್ಟರೆ ಸಿಡುಬು ರೋಗದ ಬಾಧೆಯಿಲ್ಲ. ಈ ರೋಗವು ಪ್ರಾರಂಭವಾದಂದಿನಿಂದ ಯಾರ್ಯಾರು ದಾಕು ಹಾಕಿಸಿಕೊಂಡಿರುವರೋ ಅವರಲ್ಲನೇಕರಿಗೆ ಸಿಡುಬು ತಗಲಲೇ ಇಲ್ಲ. ಇನ್ನು ಒಬ್ಬಿಬ್ಬರಿಗೆ ಕಂಡುಬಂದರೂ ನಾಲ್ಕಾರು ಬೊಕ್ಕೆಗಳು ಮಾತ್ರ. ಅಂತೂ ಪ್ರಾಣಹಾನಿಯಾದುದೇ ಇಲ್ಲ ಆದರೆ ದಾಕು ಹಾಕಿಸಿಕೊಳ್ಳದಿದ್ದವರಲ್ಲಿ ನೂರಾರು ಜನರು ಸತ್ತಿರುವರು. ನೀವು ಮುದುಕರು ನಿಮಗೆ ಜೀವದ ಮೇಲೆ ಅಷ್ಟೊಂದು ಆಶೆಯಿಲ್ಲದಿರಬಹುದು. ಆದರೆ ಪೇಚಾಡುವುದು, ನರಳುವುದು ಯಾರಿಗೆ ಬೇಕು, ಸ್ವಾಮಿ! ಅದರಲ್ಲೂ ಸಿಡುಬು ಎಂದರೆ ಆತ್ಮೀಯರೂ ಕೂಡ ಹತ್ತಿರ ಬರಲಿಕ್ಕೆ ಅಂಜುವರು. ಹತ್ತಿರವಿದ್ದವರೂ ಬಿಟ್ಟು ದೂರ ಓಡುವರು. ಎಲ್ಲಾದರೂ ಈ ರೋಗವು ನಿಮಗೆ ಸೋಂಕಿತೆಂದರೆ ನಿಮ್ಮ ಗತಿ ಏನು? ಯೋಚಿಸಿ. ಆದುದರಿಂದ ನಿಮ್ಮಂತವರು ದಾಕು ಹಾಕಿಸಿಕೊಳ್ಳಲೇ ಬೇಕು.

ಮುದುಕ:—ಅದು ಹೌದು ಸ್ವಾಮಿ ಈಗ ಸಾವಿಗೆ ನಾನು ಅಂಜುವುದಿಲ್ಲ. ಎಂತೂ ಹಣ್ಣಾದ ಎಲೆ, ಬೀಳಲೇ ಬೇಕು. ಆದರೆ ತಾವೆಂದಂತೆ ಸಿಡುಬಿನಿಂದ ಸಾಯುವುದು ಬೇಡ; ನನ್ನ ಹೆಣ ಮಣ್ಣೊಳಗೆ ಕೊಳೆಯುವುದೂ ಬೇಡ; 40 ದಿವಸಗಳ ಮೇಲೆ ಕ್ರಿಯೆ ತೊಡಗಬೇಕಾಗುತ್ತೆ; ಸತ್ತು ಮೂರೂ ಮುಕ್ಕಾಲು ಗಳಿಗೆಯೊಳಗೆ ಈ ದೇಹ ಮೂರು ಮುಷ್ಟಿ ಬೂದಿಯಾಗಬೇಕು ಸಿಡುಬಿನಿಂದ ಸತ್ತರೆ ಹಾಗಾಗುತ್ತದೆಯೆ? ಅಲ್ಲದೆ ಶವ ತೆಗೆಯಲಿಕ್ಕೆ ಜನ ಸಿಗುವುದೂ ಸಂಶಯ; ಕಡೆಗೆ ಕೃಷ್ಣಪಾದ ಬ್ರಾಂಬ್ರೇ ಗತಿಯೋ ಏನೋ! ಅದೆಲ್ಲಾ ಯೋಚಿಸಿದರೆ ಭಯವಾಗುತ್ತದೆ. ಹೂಂ—ಹಾಕಿ, ಡಾಕ್ಟಾರರೇ—ಹಾಕಿ. ದಾಕು ಹಾಕಿಬಿಡಿ (ಎಂದು ಕೈಕೊಡುವನು).

ವೆಕ್ಸಿನೇಟರ್:—[(ಸ್ವಗತ) ಶಹಬಾಸ್–ಇಂತಹ ಪೂರ್ವಾಚಾರದ ಮುದುಕ ಬ್ರಾಹ್ಮಣನು ದಾಕು ಹಾಕಿಸಿಕೊಳ್ಳುವಂತೆ ಮಾಡಿದ ನನ್ನ ವಾಗ್ಜಾಲವೇ ವಾಗ್ಜಾಲ! ಏನು ಮಾಡಲಿ, ನಾನು ಹುಟ್ಟುವಾಗ ಬೆಳಗಾಗಿತ್ತು! ನಾನೊಬ್ಬ ಬಿ.ಎ. ಬಿ.ಎಲ್. ಆಗಿದ್ದರೆ ಊರು ಅಡಿ ಮೇಲು ಮಾಡಿ ಬಿಡುತ್ತಿದ್ದೆ!]
ಬನ್ನಿ ಸ್ವಾಮಿ. ಆ ಜಗಲಿಗೆ ಹೋಗೋಣ. ಒಂದು ಕ್ಷಣದೊಳಗೆ ದಾಕು ಹಾಕಿ ಬಿಡುತ್ತೇನೆ; ಬನ್ನಿ ಸ್ವಾಮಿ.

(ಪರದೆಯು ಬೀಳುವುದು)

## ದೃಶ್ಯ ೪.—ಬೀದಿ.

(ಆನಂದನೆಂಬ ಎಲೋಪೆತಿ ಚಿಕಿತ್ಸಾಕ್ರಮ ಪ್ರಿಯನಾದ ತುಂಟಹುಡುಗನ ಪ್ರವೇಶ. ದೇಶೀಯ ಚಿಕಿತ್ಸಾಕ್ರಮವನ್ನು ಹೀನೈಸಿ ಮಾತಾಡುವನು.)

ಪದ—(ಶಾರದಾಂಬೆ ಪಾಲಿಸೆನ್ನ . . . ಎಂಬಂತೆ) ರಾಗ ಜಂಜೂಟಿ ರೂಪಕ.

ನಾಡುವೈದ್ಯರಾಯುರ್ವೇದ ವಿದ್ಯೆ ಸೋಜಿಗ ॥ ಪ ॥
ಕಾಡುಗಡ್ಡೆ ಬೇರುಬಳ್ಳಿಗಳೆಲಿಯೋಸಿದೆ ॥ ಅ. ಪ. ॥
ನಾಡಿಜ್ಞಾನದಿಂದಲೆಲ್ಲ ರೋಗತಿಳಿವುದೆ ॥
ಮೂಢಜನರು ಯೋಚಿಸವರ ಬಲೆಗೆಬೀಳ್ವರೋ ॥ ೧ ॥

ಈ ಪಂಡಿತರುಗಳಿಗೆಲ್ಲ ರೋಗಜ್ಞಾನ, ಚಿಕಿತ್ಸಾಕ್ರಮ ಇವೆಲ್ಲ ಏನು ಗೊತ್ತುಂಟು? ಇವರ ಹತ್ತಿರ ಥರ್ಮೋಮಿಟರ್ ಇಲ್ಲ; ಸ್ಟೆತೆಸ್ಕೋಪ್ ಇಲ್ಲ; ಇಂಜೆಕ್ಷನ್ ಏನೆಂದು ಗೊತ್ತಿಲ್ಲ. ಇನ್ನು ಸರ್ಜರಿಯೆಂದರೆ ಇವರ ಮುಂಡಾಸಿನ ಜರಿಯು ಭರ್ಜರಿಯೇ ಸರಿ. ಇವರು ಒಪರೇಶನ್ ಮಾಡು ವುದೆಲ್ಲ ನಾರುಬೇರುಗಳಿಗೆ! ನಾರುಬೇರುಗಳನ್ನೆಲ್ಲ ಕೊರಡಿನ ಮೇಲಿಟ್ಟು ಕೊಂಡು ಬಡ್ಡು ಚೂರಿಯಿಂದ-ಕಟಾ, ಕಟಾ, ಕಚಾ ಕಚಾ ಎಂದು ಕೊಚ್ಚು ವುದೇ ಇವರು ಮಾಡುವ ಒಪರೇಶನ್! ಎಲ್ಲದಕ್ಕೂ ಇವರ ಹತ್ತಿರ ಇರು ವುದು ನಾಡೀ ಪರೀಕ್ಷೆ! ರೋಗಿಯ ಕೈಹಿಡಿದುಕೊಂಡು ಇಂದ್ರಲೋಕ ದಿಂದ inspiration ನಿರೀಕ್ಷಣೆ ಮಾಡುವವರಂತೆ ಮೇಲೆ ನೋಡಿಬಿಟ್ಟರೆ ರೋಗ ಪರೀಕ್ಷೆಯಾಗುವುದೆ? ನನಗೇನೋ ಈ ವಿಷಯದಲ್ಲಿ ಬಹಳ ಸಂಶಯ! ಒಂದುಸಲ ಇದರ ಪರೀಕ್ಷೆ ಮಾಡಬೇಕೆಂದಿದ್ದೇನೆ. ಈ ಊರ ಲ್ಲೊಬ್ಬರು ಆಯುರ್ವೇದ ಪಂಡಿತರಿದ್ದಾರೆ! ಜನರೇನು ಮರುಳುಗಟ್ಟಿಯೋ ಏನೋ ಅಲ್ಲೇ ನುಗ್ಗುತ್ತಿದ್ದಾರೆ! ಈ ಊರ ಆರೋಗ್ಯವರ್ಧಕ ಸಭೆಯವರೂ ಪ್ರಚಾರಕಾರ್ಯಕ್ಕೆ ಅವರನ್ನು ಸೇರಿಸಿಕೊಂಡಿದ್ದಾರೆ. ಏನು ಕಾರಣ! ಅವರಲ್ಲೇನಾದರೂ ಜಿಂದಿಗೆಯಿದೆಯೆ? ಅಥವಾ ಎಲ್ಲಾ ಗಿಲೀಟೊ! ಗಿಲೀ ಟಾದರೆ ಇಷ್ಟು ಸಮಯದ ವರೇಗೂ ನಡೆಯುವುದೆ? ಓಹೊ! ಅವರೇ ಈ ಮಾರ್ಗವಾಗಿ ಬರುತ್ತಿದ್ದಾರೆ. ಅವರನ್ನೀಗ ಪರೀಕ್ಷೆ ಮಾಡಿಬಿಡು ತ್ತೇನೆ; ನನ್ನ ನಟನಾಚಾತುರ್ಯಪ್ರದರ್ಶನಕ್ಕಿದೊಂದು ಸುಸಂದರ್ಭ! (ಎನ್ನುತ್ತ ನೋವಿಂದ ನರಳುತ್ತಿರುವಂತೆ ನಟಿಸುತ್ತ ಪಂಡಿತರು ಸಮೀಪಿಸಿದಂತೆ ಅತಿರೇಕವಾ

ದಂತೆ ತೋರಿಸಿ ಅವರು ಹತ್ತಿರ ಬಂದಾಗ) ಅಯ್ಯಯ್ಯೋ! ನೋವು, ನೋವು! ಹೂಂ, ಹೂಂ ಅಯ್ಯಬ್ಬ! ಅಯ್ಯಯ್ಯೋ! ಸತ್ತೆ! ಸತ್ತೆ! ತಾಳೆನು! (ಎಂದು ಎದೆಯಮೇಲೆ ಕೈ ತಿಕ್ಕುತ್ತ ಅಲ್ಲೇ ಕೂತುಬಿಡುವನು.)

**ಪಂಡಿತ:**—ಏನಪ್ಪಾ? ನಿನಗೇನಾಗುತ್ತದೆ?

**ಆನಂದ:**—(ದೀರ್ಘ ಶ್ವಾಸಬಿಡುತ್ತ ನರಳುತ್ತ) ದಮ್ಮಯ್ಯ, ಬದುಕಿಸಿ, ಸಾಯುತ್ತೇನೆ; ಬೇಗ, ಸರಿಯಾಗಿ ಪರೀಕ್ಷೆಮಾಡಿ, ಔಷಧಿ ಕೊಡಿರಿ, ಅಯ್ಯಯ್ಯೋ, ನೋವು, ನೋವೂ! ಎದೆಯಲ್ಲಿ, ಒಳಗೆ—ಒಳಗೆ, ಕಠಿಣ ನೋವು! ತಾಳಲಾರೆನಪ್ಪಾ! ಪ್ರಾಣಹೋಗುತ್ತದೆ! ಅಯ್ಯಬ್ಬ, ಸತ್ತೆ! ಅಯ್ಯಯ್ಯೋ! ಕಾಪಾಡಿ, ಪಂಡಿತರೆ, ಬದುಕಿಸಿ, ಪುಣ್ಯ ನಿಮಗೆ!

**ಪಂಡಿತ:**—(ಕೈಹಿಡಿದು ನಾಡೀ ಪರೀಕ್ಷೆ ಮಾಡಿ ಆಶ್ಚರ್ಯಚಕಿತರಾಗಿ, ಸ್ವಗತ) ಇವನು ಬಲೇ ಠಕ್ಕ! ನಾನು ಇವನನ್ನು ಪರೀಕ್ಷೆ ಮಾಡುವುದಲ್ಲ; ಇವನೇ ನನ್ನನ್ನು ಪರೀಕ್ಷೆಮಾಡ ತೊಡಗಿರುವನು; ತೀರ ನಿರೋಗಿ! ಸುಖನಾಡಿಯು ಬಡಿತದ ಅನುಭವ ಮಾಡಬೇಕಾದರೆ ಈ ಹುಡುಗ ಸಿಗಬೇಕು! ಹ; ಏನು ನಟನೆ! ಪ್ರಾಣ ಹಾರಿಹೋಗುತ್ತಿದೆಯಂತೆ ಕಠಿಣ ನೋವಂತೆ! ಇರಲಿ, ಇವನ ಈ ಪರೀಕ್ಷೆಯಲ್ಲಿ ನಾನು ತೇರ್ಗಡೆ ಹೊಂದಲೇಬೇಕು. (ಪ್ರಕಾಶವಾಗಿ) ಹೌದಪ್ಪಾ ಹೌದು; ನಿನಗೊಂದು ಕಠಿಣ ರೋಗ ಹಿಡಿದಿದೆ, ಅದನ್ನು ಬೇಗನೆ ಗುಣಮಾಡುವೆನು. ಇನ್ನೆಂದೆಂದಿಗೂ ಈ ರೋಗ ಬಾರದಂತೆ ಮಾಡಿ ಬಿಡುವೆನು. ಆದರೆ ಮೊದಲಾಗಿ ಇನ್ನೂ ಚೆನ್ನಾಗಿ ನಾಡಿಪರೀಕ್ಷೆ ಮಾಡ ಬೇಕು. ನೋವನ್ನು ಸ್ವಲ್ಪ ಸಹಿಸಿಕೊಂಡಾದರೂ ಸ್ವಲ್ಪ ನೆಟ್ಟಗೆ ನಿಲ್ಲ ಬಹುದೊ?

**ಆನಂದ:**—ಪ್ರಯತ್ನಮಾಡುತ್ತೇನೆ ಸ್ವಾಮಿ, ಹೇಗಾದರೂ, ನೋವು ಸಹಿಸಿಕೊಂಡಾದರೂ, ನಿಲ್ಲಲೇಬೇಕು; ಸರಿಯಾಗಿ ನಾಡಿ ಪರೀಕ್ಷೆ ಯಾಗಬೇಕಲ್ಲವೆ! (ಎಂದು ದೀರ್ಘ ಶ್ವಾಸಬಿಡುತ್ತ ನರಳುತ್ತ ಮೆಲ್ಲಮೆಲ್ಲಗೆ ಎದ್ದು ನಿಲ್ಲುವನು.)

**ಪಂಡಿತ:**—ಹೂಂ, ಸರಿ, ಸರಿ, ಸಾಕು; ಈಗ ನೀನು ತುಸ ಕಣ್ಣು ಮುಚ್ಚಿಕೊಳ್ಳಬೇಕು. ಕಣ್ಣು ಮುಚ್ಚಿಕೊಳ್ಳದಿದ್ದರೆ ನಾಡಿಯ ಗತಿ ಸರಿ ಯಾಗಿ ತಿಳಿಯುವುದಿಲ್ಲ. ಏಕೆಂದರೆ ಕಣ್ಣಿನಿಂದ ಮನಸ್ಸಿಗೆ, ಮನಸ್ಸಿಂದ

ನಾಡಿಗೆ, ಸಂಬಂಧವಿದೆ. ಕಣ್ತೆರೆದುಕೊಂಡಿದ್ದರೆ ಅದು ನೋಡುವ ವಸ್ತುಗಳಿಂದ ಮನಸ್ಸು ವಿಹ್ವಲವಾಗಿ ಅದಕ್ಕನುಸಾರವಾಗಿ ನಾಡಿಯು ಬಡಿಯುತ್ತದೆ. ಹೆದರಿಕೆಯಾಗುವ ವಸ್ತುವನ್ನು ನೋಡಿದರೆ ಎದೆ ಹೇಗೆ ಒಡೆಯುತ್ತದೆ? ಹಾಗೆಯೇ. ಆದುದರಿಂದ ನಿಜವಾದ ದೇಹಸ್ಥಿತಿಯು ತಿಳಿಯಬೇಕಾದರೆ ಕಣ್ಣು ಮುಚ್ಚಬೇಕು. ಶ್ವಾಸೋಚ್ಛ್ವಾಸ ಸರಿಯಾಗಿ ನಡೆಯಬೇಕು. ಅದಕ್ಕನುಕೂಲವಾಗುವಂತೆ ಬಾಯಿ ತೆರೆಯಬೇಕು, ನಾಲಿಗೆ ಹೊರದೂಡಬೇಕು. (ಆನಂದನು ಹಾಗೆಯೇ ಮಾಡುವನು.) ಸರಿ, ಸರಿ, ಹಾಗೆ, ಹಾಗೆ, ಟೊಪ್ಪಿ ಕೈಯಲ್ಲಿರಲಿ, ಹೂಂ, ಈಗ ಸರಿ, ನಾನು ಕಣ್ತೆರೆ ಎಂದು ಹೇಳುವ ತನಕ ಇದೇ ರೀತಿ ಇರಬೇಕು! ನಾನು ನಿನ್ನ ಎದೆ ಹಾರುವುದನ್ನೇ ನೋಡಿ ಇಂತಹ ರೋಗವೇ ಎಂದು ನಿರ್ಧರಿಸಿಬಿಡುತ್ತೇನೆ. ಈ ಕ್ರಮವು ಆಯುರ್ವೇದದಲ್ಲಿ ನಾಡಿ ಪರೀಕ್ಷೆಗಿಂತಲೂ ಉತ್ತಮ ಶೋಧನೆ ಕೊಡುತ್ತದೆ. ಈಗೋ, ಸ್ವಲ್ಪ ಬಾಯಿ ಅಗಲ ತೆರೆಯಬೇಕು—ನಾಲಗೆ ಹೊರಗೆ—ಮುಖ ಸರೀ ಎದುರು! ಸರಿ-ಹಾಗೆ—ಹಾಗೇ ನಿಲ್ಲು. ನಾನು ಸಾಕು ಎನ್ನುವ ವರೇಗೆ ಹಾಗೆಯೇ ನಿಲ್ಲಬೇಕು. ನಡುವೆ ಗಡಿಬಿಡಿಮಾಡಿದರೆ ರೋಗ ಪರೀಕ್ಷೆಯಾಗದು. ನೆನಪಿರಲಿ, ಸರಿ—ಹಾಗೇ ನಿಲ್ಲು! (ಪಂಡಿತರು ಸದ್ದುಮಾಡದೆ ಹೋಗಿಬಿಡುವರು.)

**ದಾರಿಗರು:**—(ಬಂದು ನೋಡುವರು, ನಗುವರು) ಯಾರೋ ಇದು? (ಕೆಲವು ಪೋಕಾಟಿಗೆ ಹುಡುಗರು ಟೊಪ್ಪಿಯಲ್ಲಿ ಪುಟ್ಟ ಕಲ್ಲುಗಳನ್ನು ಹಾಕುವರು.) ಇದೇನೋ ವಿಚಿತ್ರ? ಜಿಕ್ಕಾಟಣೆಯ ಹೊಸವಾದರ!

**ಆನಂದ:**—(ಕಣ್ಣು ಮುಚ್ಚಿಕೊಂಡೇ) ಛೆ! ಛೆ! ಛೆ! ಮಹಾಪಂಡಿತರು ನನ್ನ ರೋಗ ಪರೀಕ್ಷೆಮಾಡುತ್ತಿರುವರು! ಗಲಭೆ ಮಾಡಬೇಡಿ! ಪಂಡಿತರೆ, ಕ್ಷಮಿಸಿ—ಇಗೊಳ್ಳಿ ಕಣ್ಣು ಮುಚ್ಚಿಕೊಂಡೇ ಇದ್ದೇನೆ. ಆದರೆ ಬಾಯಿ ಮಾತ್ರ—ಈಗ, ಸರಿಯಾಯಿತೆ? ಇನ್ನು ಮಾತಾಡುವುದಿಲ್ಲ—ಜನರನ್ನು ನೀವೇ ದೂರಮಾಡಿಸಿ. ಹೂಂ, ಪರೀಕ್ಷೆಯಾಗಲಿ! (ಎಂದು ಪುನಃ ವಿಕಲ್ಪವಾಗಿ ಬಾಯಿತೆರೆದು ಕೈಯಲ್ಲಿ ಟೊಪ್ಪಿ ಹಿಡಕೊಂಡು ನಿಲ್ಲುವನು.)

**ದಾರಿಗರು:**—ಏನೊ! ಹುಚ್ಚು ಹಿಡಿದೆಯೇನೊ! ಪಂಡಿತರೆಲ್ಲಿದ್ದಾರೊ?

ಇದೇನು ಪೋಕಾಟಿಕೆಯೋ? ಮರುಳೊ? ಭಿಕ್ಷಾಟಣಾಕ್ರಮದಲ್ಲೊಂದು ಸುಧಾರಣೆಯೊ? ಏನಾದರೂ ಕಾಸುದುಡ್ಡು ಟೊಪ್ಪಿಗೆ ಬೀಳಲೆಂದೊ?

**ಆನಂದ:**—(ಕಣ್ತೆರೆದು ಸುತ್ತ ನೋಡುವನು. ಪಂಡಿತರು ತನ್ನನ್ನು ಬೀದಿಯಲ್ಲಿ ಪರಿಹಾಸ್ಯಕ್ಕೆ ಬಲಿಕೊಟ್ಟದ್ದಕ್ಕಾಗಿ ನಾಚುವನು.)

**ದಾರಿಗರು:**—ನಿನಗೇನಾಗಿತ್ತೊ? ಹೀಗೇಕೆ ನಿಂತಿದ್ದೆಯೊ?

**ಆನಂದ:**—(ಕೋಪಗೊಂಡು) ಏನೂ ಇಲ್ಲ! ಯಾಕೂ ಇಲ್ಲ! ಅದೆಲ್ಲ ನಿಮಗೇಕೆ? ನೀವು ನಿಮ್ಮ ದಾರಿಹಿಡಕೊಂಡು ಹೋಗಿ, ನೋಡುವ! (ದಾರಿಗರು ಹೋಗುವರು.)

**ಆನಂದ:**—(ಸ್ವಗತ) ಸರಿ, ಪಂಡಿತರು ನನ್ನ ರೋಗ ಗುಣಪಡಿಸಿದರು. ಇನ್ನು ಎಂದೆಂದಿಗೂ ಈ ರೋಗ ಬಾರದು!

---

## ದೃಶ್ಯ ೫.—ರಸ್ತೆ

(ಮಧ್ಯಪಾನದ ದ್ವಿತೀಯವಸ್ಥೆ)

(ಸುರೇಂದ್ರನು ಕುಡಿದು ಮತ್ತನಾಗಿ ಮಾಲುತ್ತ ಕಿಸೆಯಲ್ಲಿ ಬ್ರಾಂಡಿಬಾಟ್ಲಿಯನ್ನು ಹಾಕಿಕೊಂಡು ಬರುವನು.)

**ಸುರೇಂದ್ರ:**—(ಬಾಟ್ಲಿಯನ್ನು ಹೊರತೆಗೆದು ಅದನ್ನು ನೋಡುತ್ತ.)

**ಪದ—ರೂಪಕತಾಳ.**

ಆಹ ಈ ಮದುವು ಮನೋಹರ, ಯೋನೆಂಬೆ ।
ಆಹ ಈ ಸುರೆಯು ಸುವಾಸಿನಿ-ನಾನೆಂಬೆ ।
ಆಹಾ, ಬಾ, ಸುರೆಯೆ, ವಿಲಾಸಿನಿ, ಹೇ ರಂಬೆ ॥

(ಕುಡಿಯುವನು.) ಆ ಲೆಕ್ಚರಿನವನು ಹೇಳಿದ್ದು ಸರಿಯಲ್ಲ—ಅವನತಲೆ ಬುರುಡೆ! ನಾನು ಲೆಕ್ಚರ್ ಕೊಡುತ್ತೇನೆಂದು ಮುಂದೆ ಹೋದಾಗ ಆ ಜನರು—ಹುಚ್ಚರು—ಪುಂಡರು—ನನ್ನನ್ನು ದೂಡಿಬಿಟ್ಟರಲ್ಲ! ಆಂ, ಏನನರ್ಥ! ಆ ಲೆಕ್ಚರಿನವನು ಜಾತಿಭೇದ ಮರೆಯುಲಿಕ್ಕೆ—ಅಸ್ಪೃಶ್ಯತೆ ನಿವಾರಣೆಗೆ—ಅನೇಕ ದಾರಿ ತೋರಿಸಿಕೊಟ್ಟ—ಅವನ ಕರ್ಮದ ದಾರಿ! ಜಾತಿಭೇದ ನಿವಾರಣೆಗೆ,

ಮುಟ್ಟು ಚಟ್ಟು ಸುಟ್ಟು ತೆಗೆಯಲಿಕ್ಕೆ ಇದೊಂದೇ ಮಾರ್ಗ—ಈ ಸುರಾ ಪಾನ! ಇದೊಂದಿದ್ದರೆ ರೋಗರುಜಿ ಸಹ ಸೋಂಕಲಾರದು.

**ಪದ—(ಎಲ್ಲಿಹ ನಮ್ಮೆಲ್ಲರ ತಾಯಿತಂದೆ . . . ಎಂಬಂತೆ) ಚಾಪು ತಾಳ.**

**ಅಂಟುರೋಗದ ತಂಟೆಬಾರದು ಕೇಳಿ, ಮದ್ಯದ ಗುಟುಕೊಂದು ಕುಡಿರೈಯ್ಯಾ ॥**
**ಒಂದೊಂದು ಗುಟುಕಿಗೆ–ರೋಗಗಳ್ಳೂರಾರು–ತಟ್ಟನೆ ನಿಂತಿವೆ–ನಿಜವೈಯ್ಯಾ ॥**

ನನ್ನ ಲೆಕ್ಚರ್ ಬೇಡವಂತೆ! ನಾನೇನು ಕಡಿಮೆಯವನೇ? ಸುರೇಂದ್ರರಾವ್ ಎಮ್. ಎ., ಎಮ್. ಎಲ್.! ನನ್ನ ಸನ್ನದ್ದು ಹೋದರೇನಾಯಿತು! ಒಂದು ದಿನ ಈ ಸುರಾದೇವಿಯನ್ನು ಬಿಟ್ಟಿರಲಾರದೆ ಬಾಟ್ಲಿಯನ್ನು ಕಿಸೆಯಲ್ಲಿ ತುರುಕಿ ಕೊಂಡು ಕೋರ್ಟಿಗೆ ಹೋದೆ! ಏನೇನೋ ಮಾತಾಡಿದೆನಂತೆ! ಹುಚ್ಚರು ಅವರೆಲ್ಲ! ನಾನು ಮಾತಾಡುವುದು sense! solid sense! ಅವರಿಗೆ nonsense! nuisense! ಆಯಿತಂತೆ! ಸನ್ನದ್ದು ರದ್ದಾಯಿತು—ಹೋಗಲಿ! ಯಾರಿಗೆ ಬೇಕು? ನನಗೆ ಬೇಕಾದುದು ಈ ಸುರಾದೇವಿ. (ಕುಡಿಯುವನು) ಆ ಲೆಕ್ಚರಿನವನು ಏನು ಬೇಕಾದರೂ ಹೇಳಲಿ! I maintain my point. ಜಾತಿಭೇದ ನಿವಾರಣೆಗೆ ಇದು, ಇದು, ಇದೇ ಒಂದು ದಾರಿ, most effective means. ಆಹಾ! ಈ ಸುರೆ, ಇದೇನು ರುಚಿ! ನೀವು ನಗಾಡಬೇಡಿರಿ. ನನ್ನ ಒಟ್ಟಿಗೆ ಬ್ರಾಂಡಿ ಅಂಗಡಿಗೆ ಬನ್ನಿ, ಅಲ್ಲಿ ತೋರಿಸುತ್ತೇನೆ—ಈಶ್ವರ ಶಾಸ್ತ್ರಿ, ನಾನು, ಹುಸೇನ್ ಸ್ಸಾಬ, ಗಿಗೋರ್‍ರಿನ್ನಾಯ್ಕ, ಫಕೀರ, ಇಚಾಕಯ್ಯ—ನಾವೆಲ್ಲ ಅಲ್ಲಿ ಒಂದೇ ಜಾತಿ! ಒಂದೇ ಪಾತ್ರದಲ್ಲಿ ಕುಡಿಯುತ್ತೇವೆ! ಅಷ್ಟು ಸಹೋದರತ್ವ! Brotherhood! ನೋಡಬೇಕು ಅಲ್ಲಿ! ನನ್ನ point ಏನಂದರೆ ಜಾತಿಭೇದ ಮುಟ್ಟು ಚಟ್ಟು ಎಲ್ಲ ಹೋಗಿ ಈ ಲೋಕ ಸ್ವರ್ಗಲೋಕ ಆಗ ಬೇಕಾದರೆ ಈ ಸುರಾದೇವಿ ಸದಾ ಬಾಯೊಳಿರಬೇಕು—

**ಪದ—(ಜಾದು ಬರೀ ಮುರೆ . . ಎಂಬಂತೆ) ಆದಿತಾಳ.**

**ಬಾಯೊಳಿರೇ ಸುರೆ ಸ್ವರ್ಗವೆ ನೀ ಖರೆ ॥**
**ಸೇವೆಯು ಬಿಡದೆ-ನಡೆಸುವೆ ಬಾರೆ ।**
**ಕ್ಲೇಶಾ ವಿನಾಶಕಾರೀ ಸುರೆ । ಸ್ವರ್ಗವೇ ನೀ ಖರೆ ॥**

**(ಹಾಡುತ್ತ ಹೋಗುವನು. ಹಿಂದಿನಿಂದ ಸ್ವೆಕಲ್ ಬೆಲ್ ಆಗುವುದು! ಅಡ್ಡಾ**

ದಿಡ್ಡಾ ನಡೆದು ಗಡಿಬಿಡಿಯಾಗಿ ಸ್ಟ್ಯಾಕಲಿನ ಅಡಿಗೆ ಬೀಳುವನು ಕಾಲಿಗೆ ಪೆಟ್ಟಾಗುವುದು. ಅಷ್ಟರಲ್ಲಿ ಅಲ್ಲಿಗೆ ಬಂದ ಜನರು ಅವನನ್ನು ಹಿಡಿದು ಕುಳ್ಳಿರಿಸುವರು.)

**ಜನರಲ್ಲೊಬ್ಬ:**– ಇದೆಲ್ಲ ಹೆಂಡದ ಮಹಾತ್ಮೆ! ಚಿನ್ನದಂತಹ ಮನುಷ್ಯನನ್ನು ಈ ಗತಿಗೆ ತಂದಿಳಿಸಿತು! ಧರ್ಮಾಸನದಲ್ಲಿ ಕುಳಿತು ವಿರಾಜಿಸುವ ಯೋಗ್ಯತೆಯುಳ್ಳ ರತ್ನವನ್ನು ಚರಂಡಿಯಲ್ಲಿ ಹಾಕಿತು! ಮದ್ದಿಗಾದರೂ ಬ್ರಾಂಡಿ ಕುಡಿಯುವವರಿಗೆ ಈ ದೃಶ್ಯ ನೆನಪಿನಲ್ಲಿರಲಿ! (ಇನ್ನೊಬ್ಬನನ್ನು ಕುರಿತು) ಅಯ್ಯಾ ಏನು ನೋಡುತ್ತೀರಿ! ನಮ್ಮ ಸುರೇಂದ್ರರಾಯರಲ್ಲವೆ? ಒಂದು ವ್ಯಾಜ್ಯದಲ್ಲಿ ನನ್ನ ಮರ್ಯಾದೆ ಹೋಗುವುದನ್ನು ಕಾಪಾಡಿಸಿ ಕೊಟ್ಟ ಪುಣ್ಯಾತ್ಮರು ಇವರು! ಇವರನ್ನು ಮನೆಗಾದರೂ ಕೊಂಡು ಹೋಗಿಬಿಟ್ಟು ಬರಬೇಕು; ಒಂದು ಕುದುರೆ ಗಾಡಿಯನ್ನು ತನ್ನಿರಯ್ಯಾ!

**ಮತ್ತೊಬ್ಬನು:**—(ಆಚೆ ಈಚೆ ನೋಡಿ) ಏ, ಏ, ಗಾಡಿ! ಗಾಡಿ! ಇತ್ತ ತಾ! ಎಂದು ಗಾಡಿಯವನನ್ನು ಕರೆಯುವನು).

(ಪರದೆಯು ಬೀಳುವುದು)

---

## ದೃಶ್ಯ ೬.

(ಆರೋಗ್ಯ ಮಾತೆ ಎಂಬ ಲೇಡಿ ಡಾಕ್ಟರಳ ಆಫೀಸು—ಆರೋಗ್ಯ ಸುಂದರಿ ಎಂಬ ಮತ್ತೊಬ್ಬ ಡಾಕ್ಟರಳೂ ಕುಳಿತಿರುವಳು. ಆರೋಗ್ಯ ಪ್ರಚಾರದ ವಿಷಯ ಮಾತಾಡುತ್ತಿರುವರು).

**ಆರೋಗ್ಯ ಮಾತೆ:**—ಆರೋಗ್ಯ ಸುಂದರಿ! ಆರೋಗ್ಯ ಪ್ರತಾಪ ರಾಯರ ಅನುಜ್ಞೆಯಂತೆ ನಾವೂ ನಮ್ಮ ಸ್ತ್ರೀದಳವೂ ಪ್ರಚಾರ ಕಾರ್ಯವನ್ನು ಇದೇ ರೀತಿಯಲ್ಲಿ ಮುಂದುವರಿಸುತ್ತ ಹೋದರೆ ಪ್ರತಾಪರಾಯರು ಹೇಳಿದಂತೆ ಒಂದು ದಿನ ಯಮಧರ್ಮರಾಯನೂ ಬೆರಗಾಗಲೇ ಬೇಕು,

**ಆರೋಗ್ಯ ಸುಂದರಿ:**—ಅದೇನು? ಅಷ್ಟೊಂದು ಧೈರ್ಯದಿಂದ ಹೇಳುವೆ?

**ಆರೋಗ್ಯ ಮಾತೆ:**—ಇಗೋ, ನನ ಕೈಕೆಳಗೆ ಕೆಲಸ ಮಾಡುತ್ತಿರುವ ಕೆಲವು ಆರೋಗ್ಯ ರಕ್ಷಕಿಯರ ಡೈರಿಗಳನ್ನು ಪರಾಮರ್ಶಿಸಿದರೆ ಅವ

ರಿಷ್ಟು ಯೋಗ್ಯರೀತಿಯಲ್ಲಿ ಕಾರ್ಯನಿರ್ವಹಿಸುತ್ತಿರುವರೆಂಬುದು ಸ್ವಯಂ ವ್ಯಕ್ತವಾಗುವುದು. ಈ ಡೈರಿಗಳು—ಪೋಲೀಸು ಡೈರಿಗಳು—ಇವೆಲ್ಲ ವನ್ನೂ ನಿತ್ತಲ್ಲಿಂದ ಕದಲದೆ, ಬೇಕಾದರೆ ಮನೆಯ ಮೆಟ್ಟಲು ಇಳಿ ಯದೆಯೇ ತುಂಬಿಸಲಿಕ್ಕೆ ಬರುವುದೆಂಬುದೇನೋ ನಿಜ. ಆದರೆ ಈ ಡೈರಿ ಗಳು ಅಂಥವಲ್ಲ. ಅನೇಕ ವೇಳೆ ನಾನು ಆರೋಗ್ಯರಕ್ಷಕಿಯರ ಕಾರ್ಯ ಕ್ಷೇತ್ರಕ್ಕೆ ಹೋಗಿ ಇವುಗಳ ಯಥಾರ್ಥತೆಯನ್ನು ಪರಿಶೀಲಿಸಿರುವೆನು. ಅವರಲ್ಲಿ ವಂಚನೆಯಿಲ್ಲ. ತುಂಬ ಶ್ರದ್ಧೆಯಿಂದ ಕೆಲಸ ಮಾಡುವ ಅವರು ಈ ರೀತಿ ಡೈರಿತುಂಬಿಸಬೇಕಾದರೆ ಅವಿಶ್ರಾಂತವಾಗಿ ದಣಿಯುತ್ತಿರಲೇ ಬೇಕು.

**ಆರೋಗ್ಯಸುಂದರಿ:**—ನೀನು ಹೊಗಳುವುದನ್ನು ಕೇಳುವಾಗ ಆರೋಗ್ಯರಕ್ಷಕಿಯರು ಮಾಡಿರುವ ಕಾರ್ಯಗಳ ವೃತ್ತಾಂತವನ್ನು ಕೇಳ ಬೇಕೆಂದು ಆಶೆಯಾಗುತ್ತಿದೆ.

**ಆರೋಗ್ಯ ಮಾತೆ:**—ಹಾಗೂ, ಈ ಡೈರಿಯಿಂದ ಕೆಲವು ವೃತ್ತಾಂತ ಗಳನ್ನು ಎತ್ತಿ ಹೇಳುತ್ತೇನೆ, ಕೇಳು. Case No. 1. ಉಗುರು ಉದ್ದುದ್ದ ಬೆಳೆದು ಅದರೆಡೆಯಲ್ಲಿ ಕಷ್ಮಲವು ಸೇಕರಿಸಿಕೊಂಡಿದ್ದ ಬೆರಳನ್ನು ಬಾಯಿಗೆ ಹಾಕಿಕೊಂಡಿದ್ದ ಮಗು—ಉಗುರು ಕತ್ತರಿಸುವ ಅವಶ್ಯಕತೆ; ಈ ವಿಷಯ ದಲ್ಲಿ ಮಗುವಿನ ತಾಯಿಗೆ ಉಪದೇಶ.—Case No. 2. ಒಂದಿಷ್ಟಾ ದರೂ ಕೆಲಸ ಮಾಡದೆ ಹಾಸಿಗೆಯ ಮೇಲೆಯೇ ಹೊರಳಾಡುತ್ತಿದ್ದ ಶ್ರೀಮಂತ ಗರ್ಭಿಣಿ—ಈ ಅಭ್ಯಾಸದಿಂದ ಪ್ರಸವಕಾಲದಲ್ಲಿ ಉಂಟಾ ಗುವ ಕಷ್ಟ; ಗರ್ಭಿಣಿಯರಿಗೆ ಯಾವುದಾದರೊಂದು ತರದ ಲಘುವ್ಯಾಯಾ ಮದ ಅವಶ್ಯಕತೆಯ ಕುರಿತು ಉಪದೇಶ. Case No. 3. ಮಗುವಿನ ಬಾಯಿಗೆ ಮುದ್ದು ಕೊಡುವುದರ ದುಷ್ಪರಿಣಾಮ—ರೋಗಿಯ ಮುದ್ದು ಭಯಂಕರ ರೋಗದ ಸಿಡಿಮದ್ದು! ಈ ವಿಷಯ ಬೋಧನೆ. Case No. 4. ಜ್ವರದಿಂದ ನರಳುತ್ತಿದ್ದವಳ ಹಾಸಿಗೆಯಲ್ಲಿರುವ ಮಗು; ಕೆಮ್ಮು ನವನ ಮಗ್ಗುಲಲ್ಲಿ ಮಗು, ಮೈಯೆಲ್ಲಾ ಕಜ್ಜಿ ಹಿಡಿದವನು ಎತ್ತಿಕೊಂಡಿ ರುವ ಮಗು, ಹುಚ್ಚಾದ ನಾಯಿಯ ಮರಿಯೊಡನೆ ಆಡುತ್ತಿದ್ದ ಮಗು— ಇಂತಹ ಸಂಸರ್ಗಗಳಿಂದ ಮಗುವಿನ ಎಳೆಯ ದೇಹಕ್ಕೆ ರೋಗವು ಹೇಗೆ

ಅಂಟಿಕೊಳ್ಳುತ್ತದೆಂಬುದರ ಕುರಿತು ಆಯಾಯಾ ಮಗುವಿನ ತಾಯಿಗೆ ಉಪದೇಶ.

**ಆರೋಗ್ಯಸುಂದರಿ:**—ಶಹಬಾಸ್—ಕೆಲಸಮಾಡಬೇಕೆಂದರೆ ಹೀಗೆ! ಆರೋಗ್ಯ ಮಾತೆ, ನಾವೂ ನಮ್ಮ ದಳದವರೂ ಇದೇ ರೀತಿಯಲ್ಲಿ ಪ್ರಚಾರಕಾರ್ಯವನ್ನು ನಿರ್ವಹಿಸುತ್ತ ಬಂದರೆ ನೀನೆಂದಂತಾಗುವುದು ಆಶ್ಚರ್ಯವಲ್ಲ. 'ಇದೇನು! ಎಂದಿನಂತೆ ಜನರು ಹಿಂಡುಹಿಂಡಾಗಿ ನನ್ನ ಶೈಮುನೀ ನಗರಕ್ಕೆ ಬರುವುದಿಲ್ಲ' ಎಂದು ಯಮನೂ ಮೂಗಿನ ಮೇಲೆ ಬೆರಳಿಟ್ಟು ಬೆರಗಾಗಲೇ ಬೇಕು. ಇರಲಿ, ಅತ್ತ ನೋಡು, ಹುಡುಗನೊಬ್ಬನು ಬರುತ್ತಿರುವನು. ಅವನ ಮುಖವೆಷ್ಟು ಬಿಳುಪೇರಿ ಹೋಗಿದೆ! ದುರಭ್ಯಾಸದ ಫಲವಾಗಿರಬೇಕು. (ಬೀಡಿ ಸೇದುವ ಅಭ್ಯಾಸದಿಂದ ದೇಹ ದುರ್ಬಲತೆ ಹೊಂದಿದ ವಿನೋದರಾಯನ ಪ್ರವೇಶ)

**ವಿನೋದ:**—(ಆರೋಗ್ಯ ಮಾತೆಯನ್ನು ಕುರಿತು) ಅಮ್ಮಾ, ನನ್ನನ್ನು ಪರೀಕ್ಷಿಸಿರಿ; ನನಗೇನೂ ಕೂಡುವುದಿಲ್ಲ.

**ಆರೋಗ್ಯಮಾತೆ:**—ಮಗೂ, ನಿನಗೇನಾಗುತ್ತದೆ?

**ವಿನೋದ:**—ಏನಾಗುತ್ತದೆಂದು ಹೇಳಲಿ! ಏನೇನೋ ಆಗುತ್ತದೆ—ತಲೆ ತಿರುಗುತ್ತದೆ; ಏನು ಮಾಡಲಿಕ್ಕೂ ಶಕ್ತಿಯಿಲ್ಲ; ಒಂದಿಷ್ಟು ನಡೆದರೆ ಎದೆ ಬಡಿದಾಡುವುದು, ಉಸುರುಗಟ್ಟಿದಂತಾಗುವುದು, ಉಬ್ಬಸ ಬರುವುದು.

**ಆರೋಗ್ಯಮಾತೆ:**—ನಿನಗೆ ಮೊದಲಿಂದಲೂ ಹೀಗಾಗುತ್ತಿತ್ತೆ?

ವಿನೋದ:—ಇಲ್ಲ, ಇತ್ತೀಚೆಗೆ ಆರು ತಿಂಗಳಿಂದ. ಒಂದು ವರುಷದ ಹಿಂದೆ ನಾನು ಬಲು ಗಟ್ಟಿಮುಟ್ಟಾಗಿದ್ದೆ. ಜೂನಿಯರ್ ರೇಸ್‌ನಲ್ಲಿ ನಾನು first; Long jump, high jumpಗಳಲ್ಲಿ ನನಗೆ ಮೊದಲು! ಈಗ ಮಾತ್ರ ಮೆಲ್ಲಗೆ ನಡೆದರೂ ಮೇಲುಬ್ಬಸ ಬರುತ್ತದೆ. ತಲೆ ತಿರುಗುತ್ತದೆ. ಓದಿದ್ದು ನೆನಪು ಉಳಿಯುವುದಿಲ್ಲ!

**ಆರೋಗ್ಯಮಾತೆ:**—ಇತ್ತ ಬಾ (ಸ್ಟೆತೆಸ್ಕೋಪ್ ಇಟ್ಟು) take deep breath; ಸರಿಯಾಗಿ ಉಸಿರಾಡು.

ವಿನೋದ:—(ಪ್ರಯತ್ನ ಮಾಡಿ) ಇಲ್ಲ, ಆಗುವುದಿಲ್ಲವಮ್ಮ.

ಆರೋಗ್ಯಮಾತೆ:—ಪ್ರಯತ್ನ ಮಾಡು; ಹೂಂ, ಇನ್ನೊಮ್ಮೆ.

ವಿನೋದ:—ಇಲ್ಲ, ಆ....ಗು....ವು....ದಿಲ್ಲ. ಅಯ್ಯೋ, ತಲೆ ತಿರುಗುತ್ತದೆ. ಬೀಳುತ್ತೇನೆ! (ಎಂದು ಕುಳಿತುಬಿಡುವನು)

ಆರೋಗ್ಯಮಾತೆ:—ನಿನ್ನ ಶ್ವಾಸಕೋಶಗಳು ಬಹಳ ಬಲಗುಂದಿವೆ. ಈ ಪ್ರಾಯದಲ್ಲಿ ಹೀಗಾಗಬೇಕಾದರೆ ಸೈಕಲ್ ಸವಾರಿ ಇಲ್ಲವೆ ಬೀಡಿ ಸೇವನೆ ವಿಶೇಷವಾಗಿರಬೇಕು. ನೀನು ಸೈಕಲ್ ಸವಾರಿ ಮಾಡುತ್ತೀಯಾ?

ವಿನೋದ:—ಇಲ್ಲ. ಅದನ್ನು ಕಲಿಯಬೇಕೆಂದಿದ್ದೆ. ಅಷ್ಟರಲ್ಲಿಯೇ ಹೀಗಾಯಿತು!

ಆರೋಗ್ಯಮಾತೆ:—ಹಾಗಾದರೆ ಬೀಡಿ ಸೇದುತ್ತೀಯಾ? ಅದೇನು? ನಿನ್ನ ತುಟಿಗಳು ಸುಟ್ಟ ಹಾಗೆ ಕಪ್ಪಾಗಿವೆ?

ವಿನೋದ:—ಬೀಡಿ! ಬೀಡಿ ಸೇದುವುದು!! ಆಂ—ಹೂಂ—ಬೀಡಿ! ಎಲ್ಲಾದರೂ—ಊಂ—ಬೀಡಿ! ಅದರಿಂದ ಹೀಗೆಲ್ಲಾ ಆಗುವುದೆ? ದೊಡ್ಡ ದೊಡ್ಡವರೆಲ್ಲ ಸೇದುತ್ತಾರೆ! ನಾನು ಬೀಡಿ! ಹೂಂ, ಬೀಡಿ! ಎಲ್ಲಾದರೂ....

ಆರೋಗ್ಯಮಾತೆ:—ಎಲ್ಲಾದರೂ? ಏಕೆ? ಸದಾ—ನೋಡು, ನಿನ್ನ ತುಟಿಗಳು ಕಪ್ಪುಕಟ್ಟಿ ಹೋಗಿವೆ! ನಿನ್ನ ಬಾಯಿಯಲ್ಲಿ ಬೀಡಿಯ ಹೊಗೆಯ ವಾಸನೆ ಹೊಡೆಯುತ್ತದೆ! ಅದೇಕೆ ಆ ಕಿಸೆಯ ಕಡೆಗೆ ನೋಡುವೆ? ಅಲ್ಲೇನಿದೆ ನೋಡೋಣ! (ಎಂದು ಆತನ ಕಿಸೆಗೆ ಕೈಹಾಕಿ ಬೀಡಿಯ ಕಟ್ಟನ್ನು ತೆಗೆಯುವಳು) ಇದೇ ನಿನ್ನನ್ನು ಈ ಅವಸ್ಥೆಗೆ ತಂದ ವಿಷ! ಈ ದುರಭ್ಯಾಸವನ್ನು ಪ್ರಾರಂಭಿಸುವ ಮೊದಲು ಚೆನ್ನಾಗಿದ್ದಿಯಲ್ಲವೆ? ಇದು ಚಿಕ್ಕ ಮಕ್ಕಳ ಶ್ವಾಸಕೋಶವನ್ನು ಸಂಪೂರ್ಣ ಕೆಡಿಸಿಬಿಡುವುದು.

ವಿನೋದ:—ಅಮ್ಮಾ, ನನಗೆ ಗೊತ್ತಾಗಲಿಲ್ಲ! ದೊಡ್ಡವರು ಮಾಡುತ್ತಾರೆಂದು ನಾನೂ ಮಾಡಿಬಿಟ್ಟೆ! ಇದನ್ನು ಬಿಟ್ಟರಾದರೂ ನಾನು ಮೊದಲಿನಂತೆ ಆದೇನೆ?

**ಪದ—ತ್ರಿವಟೆ ತಾಳ.**

**ನಾನರಿಯದೆ ಮೋಸಹೋದೆ ॥ ಬೀಡಿಯು ಸೇದಿ ಬಲವಳಿಯಿತು ಹಾ ॥**
**ಬೀಡಿಯು ದೋಷವ—ತಿಳಿಯದೆ ಕುಮತಿ—ಯಾಗಿನಾ**
**ಬರಿಮರುಳಾಗುತಲಿ—ಈ ತೆರದಿ ಬಲಗುಂದಿದೆನು ॥**

**ಆರೋಗ್ಯಮಾತೆ:**—ಇನ್ನಾದರೂ ನಾನು ಹೇಳಿದಂತೆ ನೀನು ನಡೆದರೆ ಮುಂಚಿನಂತೆಯೇ ಆಗುವಿ. ಇಂದಿನಿಂದ—ಈ ಕ್ಷಣದಿಂದ—ಈ ಅಭ್ಯಾಸವನ್ನು ಬಿಟ್ಟೇ ಬಿಡಬೇಕು. ಇದನ್ನು ಸರ್ವತಃ ಮುಟ್ಟಬೇಡ (**ಎಂದು ಬೀಡಿಯ ಕಟ್ಟನ್ನು ತೆಗೆದು ಬಿಸುಡುವಳು**) ಶುದ್ಧವಾದ ವಾಯುಸೇವನೆ—ಮಿತವಾದ ಆರೋಗ್ಯಕರವಾದ ಆಹಾರ—ಮಿತ ವ್ಯಾಯಾಮ—ಇದೋ ಈ ಶಕ್ತಿವರ್ಧಕ ಔಷಧ, ಇವುಗಳಿಂದ ನಿನ್ನ ಶಕ್ತಿಯು ಬರುವುದು. ಆದರೆ—ನೆನಪಿರಲಿ, ಬೀಡಿ ಸೇದುವುದನ್ನು ಬಿಟ್ಟರೆ ಮಾತ್ರ! ಬೀಡಿ ಬಿಟ್ಟು ಸ್ಟೈಕಲ್ ಹಿಡಿದರೂ ಆಗುವುದು ಇದೇ ಗತಿ. ಮರೆಯಬೇಡ!

**ಪದ—ಆದಿ ತಾಳ.**

**ಕುವರ ಲಾಲಿಸು ಮಾತ—ಬೀಡಿ ಸೌಖ್ಯನಾಶಿನಿ ॥**
**ಬಿಡುವುದು ತನು ಸೌಖ್ಯಕೆ ನಿಜದಾರಿ ಕುವರ ।**
**ಬಿಡದೆ—ಬರಿದೆ—ಕೆಡುವೆ—ಕಡೆಗೆ—ಒಡಲ—ಬಿಡುವೆ ।**
**ಬೀಡಿ ಸೌಖ್ಯ ನಾಶಿನಿ ॥ ೧ ॥**

**ವಿನೋದ:**—ನಿಮ್ಮ ಮಾತುಗಳನ್ನೆಂದಿಗೂ ಮರೆಯೆನು. ಅಂತೆಯೇ ವರ್ತಿಸುವೆನು. ಹೇಗಾದರೂ ನಾನೊಮ್ಮೆ ಮೊದಲಿನಂತಾದರೆ ಸಾಕು.

**ಆರೋಗ್ಯಮಾತೆ:**—ಈ ದುರಭ್ಯಾಸವನ್ನು ಬಿಡು, ಬೇರೆ ದುರಭ್ಯಾಸಕ್ಕೆ ಬಲಿಬೀಳಬೇಡ. ನಾನು ಹೇಳಿದುದನ್ನು ನೆನಪಿನಲ್ಲಿಡು. ಇನ್ನು ಗಟ್ಟಿಮುಟ್ಟಾಗುವೆಯೆಂದು ಮನಸ್ಸಿನಲ್ಲಿ ನಿಶ್ಚಯ ಮಾಡಿಕೊ. ವಾರಕ್ಕೊಮ್ಮೆ ಇಲ್ಲಿಗೆ ಬಾ. ನೀನು ಏನೇನು ಮಾಡಬೇಕೆಂಬುದನ್ನೆಲ್ಲ ಆಗಾಗ ಹೇಳುತ್ತೇನೆ.

**ವಿನೋದ:**—ಆಗಲಮ್ಮಾ! ನಾನು ಹೋಗಲೆ? ಇನ್ನೊಂದು ವಾರ ಬರುವೆನು.

ಆರೋಗ್ಯಮಾತೆ:—ಮಗೂ, ಹೋಗು, ನೀನು ಗಟ್ಟಿಮುಟ್ಟಾಗಿ ಸೌಖ್ಯದಿಂದ ಬಾಳುವೆ. ಧೈರ್ಯಮಾಡಿಕೊ. (ಹೋಗುವನು).

ಆರೋಗ್ಯಸುಂದರಿ:—ಆರೋಗ್ಯ ಮಾತೆ, ಇಂದಿನ ಪ್ರಚಾರಕ್ಕಾಗಿ ಹೊರಡೋಣವೆ?

ಆರೋಗ್ಯಮಾತೆ:—ಹೋಗೋಣ (ಎಂದು ಇಬ್ಬರೂ ಹೊರಡುವರು)

ಪದ—(ಪ್ರೇಮ ನೇಮ . . . ಎಂಬಂತೆ) ಆದಿತಾಳ.

ಕೇರಿ ಕೇರಿ ಸೇರಿ ಸಾರಿ । ಸತತ ಸುಖವ ಗಳಿಪ ಮಾರ್ಗವ ॥
ಇಹದೆ—ಸುಖದೆ—ಬಾಳೀ ಗೃಹದೆ । ಜೀವನವ ನಡೆಸಿ ಸಂಸಾರದೆ ॥
ಸುಖದಾದಾರಿ ಬಿಡದ್ಯೆ ಸೇರಿ ಸುಖದಿಂ ಬಾಳಿ, ವಿಮಲತೆ ದೋರಿ ।
ತಿಳಿದು ನಡೆದು ಕಡುಸುಖದ ಪದದ ರುಚಿಯರಿತು ನಡೆಯುಲು ॥ ೧ ॥

---

## ದೃಶ್ಯ ೩.—ಬೀದಿ.

ಸೇಕರ ಮಿಠಾಯಿವಾಲ ತಿಮ್ಮಣ್ಣನು ದೇವದಾರದ ಮುರುಕು ಪೆಟ್ಟಿಗೆಯ ಮೇಲೆ ಒಂದು ಹಲಿಗೆಯನ್ನಿಟ್ಟು ಅದರಲ್ಲಿ ಸೇಕರ್ ಮಿಠಾಯಿ, ಚಕ್ಕುಲಿ, ಅಪ್ಪದಡ್ಡೆ, ಸುಕುನುಂಡೆ ಮುಂತಾದ್ದನ್ನು ಹಿಡಕೊಂಡು ಪ್ರವೇಶಿಸುವನು).

ಪದ—ದಾದರ ತಾಳ.

ಸೇಕರ್ ಮಿಠಾಯಿ! ಮಿಠಾಯಿ ಸಿಹಿ ಬೆಲ್ಲದಿ!
ತಿಂದ ಮೇಲೇ ಬಾಲರು ಮಾಡ್ವರು ತಕ್ಕ ತೈ!
ಚಿಕ್ಕ ಮಕ್ಕಳಿರ, ದೊಡ್ಡ ಮಕ್ಕಳಿರ, ಬಸ್ನಿರಿ, ತಿಸ್ನಿರಿ,
ಸೇಕರ್ ಮಿಠಾಯಿ ಮಿಠಾಯಿ ಸಿಹಿಬೆಲ್ಲದಿ ॥

ಸೇಕರ್ ಮಿಠಾಯಿ! ಸೇಕರ್ ಮಿಠಾಯಿ! (ಎಂದು ಕುಳಿತುಕೊಳ್ಳುವನು. ಎದುರಲ್ಲಿ ಪೆಟ್ಟಿಗೆಯ ಮೇಲೆ ಹಲಗೆಯನ್ನು ಇಟ್ಟುಕೊಳ್ಳುವನು) ಸೇಕರ್ ಮಿಠಾಯಿ! ಸೇಕರ್ ಮಿಠಾಯಿ!

ತಿಮ್ಮಣ್ಣ:—(ಸ್ವಗತ) ಈ ಸೇಕರ್ ಮಿಠಾಯಿಯ ರುಚಿಯೊ ಇಲ್ಲವೆ ನನ್ನ ಪುಣ್ಯಾದ ಮಹಾತ್ಮೆಯೊ ಯಾವುದೋ ಬಲವಾಗಿರಬೇಕು! ಹಾಗಿಲ್ಲದಿದ್ದರೆ—ಮಕ್ಕಳು ನನ್ನ ತಲೆ ನೋಡುವುದೇ ತಡ, ಈ ಸೇಕರ್ ಮಿಠಾಯಿಗೆ ನೊಣಗಳು ಮುತ್ತಿಕೊಳ್ಳುವಂತೆ. ಅವರು ನನ್ನನ್ನು ಸುತ್ತಿಕೊಳ್ಳು,

ವರು. ಎಷ್ಟು ಸಲ ತರಲಿ—ಹೇಗೆ ಮಾಡಿ ತರಲಿ, ತೌಡು ದೂಳಿ ಪಾಕ ಮಾಡಿ ತರಲಿ—ಕ್ಷಣದೊಳಗೆ ಕರ್ಚುರ್! ಅಬ್ಬಬ್ಬಾ ನೊಣಗಳೆ! (ಎಂದು ತನ್ನ ಮೈಯ ಕಜ್ಜಿಹುಣ್ಣುಗಳ ಮೇಲೆ ಕೂತ ನೊಣಗಳನ್ನು ಓಡಿಸುವನು. ಆ ಹುಣ್ಣುಗಳನ್ನು ನೋಡುತ್ತ) ಇದು ನಮ್ಮ ಕಷ್ಟಾರ್ಜಿತದ್ದು! ಬಹಳ ಪೇಚಾಡಿ ಒಟ್ಟುಗೂಡಿಸಿದ ದುಡ್ಡನ್ನು ಆ ಪಚೀತಿ ಗಲ್ಲಿಯಲ್ಲಿ ಅಪ್ಪಿರಂಗಿಗೆ ಸುರಿದು ಕ್ರಯಕ್ಕೆ ಪಡದ್ದು! ಸುಖ ಸಂಪಾದನೆ ಮಾಡಿದ್ದು! ಕೆಟ್ಟರಂಡೆ! ನನ್ನ ದುಡ್ಡು, ರಕ್ತ ಎಲ್ಲ ಹೀರಿ—ಕಡೆಗೆ ಕೊಟ್ಟದ್ದು ಈ ಹುಣ್ಣು! ಮೂರು ತಿಂಗಳು ಆಸ್ಪತ್ರೆಯಲ್ಲಿ ಬಿದ್ದಿದ್ದೆ! ನರಕಯಾತನೆಯೆಲ್ಲ ಅನುಭವಿಸಿದೆ. ಇನ್ನೂ ಮುಕ್ತಿಯಿಲ್ಲ. ನನ್ನ ಜನ್ಮ ಜನ್ಮಾಂತರಕ್ಕೆ ಬೇಡ ಆ ಚಿಣ್ಣಿ ಮಿಣ್ಣಿಯರ ಸಂಗ! ಅಬ್ಬಬ್ಬಾ ನೊಣಗಳೇ! (ಎಂದು ಪುನಃ ಹುಣ್ಣಿನ ಮೇಲೆ ಕೂತ ನೊಣಗಳನ್ನು ಹೊಡೆಯುವನು) ಸೂಳೆರ ಸಂಗ ಮಾಡುವವರು ನನ್ನನ್ನು ಕಂಡು ಮರೆಯಬೇಕು! ಈ ಸೇಕರ್ ಮಿಠಾಯಿ ನನ್ನಬಳಿಯಲ್ಲಿ ಯಾವಾಗಲೂ ಇದ್ದುದರಿಂದ ಬದುಕಿಕೊಂಡೆ—ಇಲ್ಲವಾದರೆ ಈ ನೊಣಗಳು ನನ್ನ ಒಂದೊಂದು ಹುಣ್ಣನ್ನು ಬಾವಿಯಂತೆ ಕೊರೆದು ತಿಂದುಬಿಡುತ್ತಿದ್ದವು! ಏ ನೊಣಗಳೆ! ನಿಮಗೆ ಎಲ್ಲವೂ ಒಂದೇ! ಈ ಹುಣ್ಣಿನಿಂದ ಸೇಕರ್ ಮಿಠಾಯಿಗೆ—ಚಕ್ಕುಲಿಗೆ—ಅಲ್ಲಿಂದ ಈ ಚರಂಡಿಯಲ್ಲಿರುವ ಆ ಹೇಸಿಕೆಯ ಮೇಲೆ! ಅನಂತರ ಆ ಕಾಫಿಯಂಗಡಿಯ ತಿಂಡಿಯ ಮೇಲೆ —ಬೀದಿಯಲ್ಲಿ ಕೆಮ್ಮಿನವರು ಉಗುಳಿದ್ದುದರ ಮೇಲೆ! ಪುನಃ ಈ ಹುಣ್ಣಿನ ಮೇಲೆ! ಸರ್ವ ವ್ಯಾಪಿಗಳೆಂದರೆ ನೀವೇ! ನಿಷ್ಪಕ್ಷಪಾತಿಗಳೆಂದರೆ ನೀವೇ, ಎಲ್ಲಿ ಬೇಕಾದರೂ ಕೂತುಕೊಳ್ಳಿರಿ! ಈ ಹುಣ್ಣಿನ ಮೇಲೆ ಮಾತ್ರ ಬರಬೇಡಿರಿ (ಎಂದು ಹೊಡೆಯುವನು, ಹೊಡೆಯುವಾಗ ಕಾಲು ಹಲಿಗೆಗೆ ತಾಗಿ ಸೇಕರ್ ಮಿಠಾಯಿಗಳೆಲ್ಲ ನೆಲಕ್ಕೆ ಬೀಳುವವು.) ಅಯ್ಯೋ! ಎಲ್ಲಾ ದೂಳಿಗೆ ಬಿದ್ದುವಲ್ಲ! ಇನ್ನು ಹುಡುಗರು ಬಂದು ನೋಡಿದರೆ!! (ಬೇಗ ಬೇಗನೆ ಅವುಗಳನ್ನೆಲ್ಲ ಹೆಕ್ಕಿ ತಿಕ್ಕಿ ಒರಸಿ ಹಲಗೆಯ ಮೇಲೆ ಇಡುವನು.) ಪುಣ್ಯಾಕ್ಕೆ ಈ ಸೇಕರ್ ಮಿಠಾಯಿ ಅಂಟಾಗಿದ್ದುದು ಒಳ್ಳೆಯದೇ ಆಯಿತು. ದೂಳಿನಲ್ಲಿ ಹೊರಳಿದಷ್ಟು ಇವಕ್ಕೆ ಒಂದೊಂದು ಬಣ್ಣ ಬರುವುದು! (ಎಂದು ತಿಕ್ಕಿ ತಿಕ್ಕಿ ಹಲಗೆಯ ಮೇಲೆ ಇಡುವನು. ಅಷ್ಟರಲ್ಲಿ ಖರ್ಜೂರ ಮಾರುತ್ತ ಮಂಜಣ್ಣನು ಬರುವನು.)

ತಿಮ್ಮಣ್ಣ:—ಓ ಹೋ ಹೋ! ಗಜ್ಜುಗದ ಹಣ್ಣಿನ ಮಂಜಣ್ಣಾ, ನೀನೇನು ಬರಲಿಲ್ಲ ಎಂತ ಯೋಚಿಸುತ್ತಿದ್ದೆ. ಬಾ--ಬಾ--ಬಾ. ಒಬ್ಬನೇ ಕುಳಿತು ಬೇಸರವಾಗಹತ್ತಿದೆ. (ಮಂಜಣ್ಣನು ತನ್ನ ಕುಕ್ಕೆಯನ್ನು ಎದುರಲ್ಲಿಟ್ಟು ಕೊಂಡು ತಿಮ್ಮಣ್ಣನ ಎದುರು ಕೂತುಕೊಳ್ಳುವನು).

ಮಂಜಣ್ಣ:—(ರಾಗದಿಂದ ಹಾಡುವನು) ಚಾಪು ತಾಳ.

ಖರ್ಜೂರ ನೋಡಿರಿ ಬಣ್ಣದಿ ಹೊನ್ನು! |

ತಿಮ್ಮಣ್ಣ:—(ಕುಚೋದ್ಯಮಾಡುತ್ತ) ಅದರೊಳಗಿರುವುದು ಬೀದಿಯ ಮಣ್ಣು ||

ಮಂಜಣ್ಣ:—ಸಿಹಿ ಸಿಹಿ ಗಜ್ಜುಗ ನೀವೀಗ ತಿನ್ನಿ! |

ತಿಮ್ಮಣ್ಣ:—ಕಸಕಡ್ಡಿ ನೊಣಗಳ ಗಬಗಬ ಉಣ್ಣಿ! ||

ಮಂಜಣ್ಣ:—ಏನೋ ತಿಮ್ಮಣ್ಣ, ನನ್ನ ಖರ್ಜೂರವನ್ನು ಗೇಲಿ ಮಾಡುವೆಯಾ? ನಿನ್ನ ಸೇಕರ್ ಮಿಠಾಯಿ ಮಾತ್ರ ಬಹಳ ಚಲೋದಲ್ಲವೆ? ಅದರಲ್ಲಿ ದೂಳು ಮಣ್ಣು ಇಲ್ಲವೆ?

ತಿಮ್ಮಣ್ಣ:—ಬರೇ ಕುಶಾಲು! ಈಗ ಇಲ್ಲಿ ಯಾರೂ ಇಲ್ಲ. ಗಿರಾಕಿಗಳು ಬಂದಾಗ ಹಾಗೆ ಹೇಳಿಯೇನೆ? ಅವರೆದುರಿಗೆ ನಿನ್ನ ಸರಕನ್ನು ನಾನು ಹೊಗಳಬೇಕು. ನನ್ನದನ್ನು ನೀನು ಹೊಗಳಬೇಕು.

ಮಂಜಣ್ಣ:—ಸರಿ, ನಿನ್ನ ಬಳಿಗೆ ಗಿರಾಕಿಗಳು ಬಂದಾಗ ನಿನ್ನ ಸೇಕರ್ ಮಿಠಾಯಿ ತಿಂದರೆ ನಿಜವಾಗಿಯೂ ಆ ರೋಗ ಬರುವುದು ಎಂತ ನಾನು ಬೊಬ್ಬೆ ಇಡುತ್ತೇನೆ. ನೀನು................

ತಿಮ್ಮಣ್ಣ:—ಏನೆಂದೆ? ರೋಗ ಬರುವ ತಿಂಡಿಯನ್ನು ಯಾರು ಮುಟ್ಟ್ಯಾರು?

ಮಂಜಣ್ಣ:—ರೋಗದ ಸಂಗತಿ ಯಾರು ಮಾತಾಡಿದರು! ನಾನೆಂದುದ್ದು ಆರೋ....ಗ್ಯಾಯು! ನಿನ್ನ ಸೇಕರ್ ಮಿಠಾಯಿ ತಿಂದರೆ ನಿಜವಾಗಿಯೂ ಆರೋಗವಿಲ್ಲದವರಿಗೆ ಆರೋಗ ಬರುವುದು—ಎಂದು.

ತಿಮ್ಮಣ್ಣ:—ಸರಿ. ಈ ರೀತಿ ನನ್ನ ಹುಣ್ಣನ್ನು ತೋರಿಸುತ್ತ ನಿನ್ನ ದಪ್ಪ ನಾಲಿಗೆಯಿಂದ ಹೇಳಿಬಿಟ್ಟರೆ ಒಂದಕ್ಕೊಂದು ಅರ್ಥವಾದೀತು ಮಂಜಣ್ಣಾ! ನಿನ್ನ ನಾಲಿಗೆಗೆ ಅರ ಹಾಕಿಕೊ!

ಮಂಜಣ್ಣ:—ಹೂಂ. ಆರೋಗ, ಆರೋಗ್ಗ, ಆರೋಗಯ, ಆರೋಗ್ಯಯ, ಆರೋಗ್ಯ! ಅಬ್ಬಬ್ಬ! ಎಷ್ಟು ಕಷ್ಟ! ಆ ಸುಟ್ಟ ಹೆಸರು! ಸರಿ "ಆರೋಗ್ಯ ಇಲ್ಲದವರಿಗೆ ಆರೋಗ್ಯ" ಬರುವುದು. ಸರಿಯಾಯಿತೆ?

ತಿಮ್ಮಣ್ಣ:—ಸರಿ, ಸರಿ, ಮರೆಯ ಬೇಡ. ಮರೆತರೆ ನಾನೂ ಹೇಳಿ ಬಿಟ್ಟೇನು, ಜಾಗ್ರತೆ!

ಮಂಜಣ್ಣ:—ಏನೆಂದು?

ತಿಮ್ಮಣ್ಣ:—ನಿನ್ನ ಗಜ್ಜುಳದ ಹಾಡಿನ ಸೊಲ್ಲಿಗೊಂದು ಅಡ್ಡ ಸೊಲ್ಲು.

ಮಂಜಣ್ಣ:—ಹೇಗೆ?

ತಿಮ್ಮಣ್ಣ:—ನಿನ್ನ ಸೊಲ್ಲಾಗಲಿ, ಮತ್ತೆ ನನ್ನ ಅಡ್ಡ ಸೊಲ್ಲು!

ಮಂಜಣ್ಣ:—"ಖರ್ಜೂರ ನೋಡಿರಿ ಬಣ್ಣ ದ ಹೊಸ್ತು"

ತಿಮ್ಮ:—"ಅದರೊಳಗಿರುವುದು ಬೀದಿಯ ಮಣ್ಣು"

ಮಂಜಣ್ಣ:—"ಸಿಹಿ ಸಿಹಿ ಗಜ್ಜುಳ ನೀವೀಗ ತಿನ್ನಿ

ತಿಮ್ಮ:—"ಕಸಕಡ್ಡಿ ನೊಣಗಳ ಗಬಗಬ ತಿನ್ನಿ"

ತಿಮ್ಮ:—ಹ ಹಾ ಹ್ಹಾ—ಹೇಗೆ? ನಿನ್ನ ಆರೋಗ ಒಂದರ ಅದಕ್ಕೆ ಇದು ಮದ್ದು! (ಮಂಜಣ್ಣನು ಬೆರಳು ಲೆಕ್ಕ ಮಾಡುತ್ತಿರುವನು. ಅದನ್ನು ಕಂಡು) ಮಂಜಣ್ಣಾ ಅದೇನು ಲೆಕ್ಕ?

ಮಂಜಣ್ಣ:—ಇಂದಿನ ವ್ಯಾಪಾರದಲ್ಲಿ ಕಲ್ಲುಕುಟಿಗದೇವರ ಚಮತ್ಕಾರ ಇರಬೇಕು ನೋಡು! ಕಲ್ಲುಕುಟಿಗ ದೇವರೇ, ನಿನ್ನ ಕಂಭದ ಎದುರು ಹಣ್ಣುಕಾಯಿ ಇಟ್ಟು ಅಡ್ಡ ಬೀಳುತ್ತೇನೆ. ಇದೇ ರೀತಿ ನಡೆಸಪ್ಪಾ! ಬಡವನನ್ನು!

ತಿಮ್ಮ:—ಅದೇನು ಚಮತ್ಕಾರ? ಹೇಳು! ಹೇಳು! ನಾನೂ ಹಣ್ಣು ಕಾಯಿ ಇಡುತ್ತೇನೆ.

ಮಂಜಣ್ಣ:—ನೋಡು, ನಾನು ಮನೆಯಿಂದ ಹೊರಡುವಾಗ ಮೂರು ಮೂರು ಸಲ ಸರೀ ತೂಕ ಮಾಡಿ 20 ಸೇರು ಗಜ್ಜುಳ ತಂದಿದ್ದೆ. ಸೇರು ಕಲ್ಲಿನ ಬದಲಿಗೆ ಅರ್ಧ ರಾತ್ಲು ಕಲ್ಲೆ ಇಟ್ಟು ಮಾರಿದೆ. ಹಾಗೆ ಮಾಡಿದರೆ 5 ಸೇರಿಗೆ ಆರು ಸೇರು ಆಗುತ್ತದೆ. ನಾನು ತೂಕ ಮಾಡಿ ನೋಡಿದ್ದೇನೆ. ಸಂಶಯವೇ ಇಲ್ಲ. ಎಂದ ಮೇಲೆ 5 ಸೇರಿಗೆ 6 ಸೇರು 10 ಸೇರಿಗೆ?

ತಿಮ್ಮ:—12 ಸೇರು.

ಮಂಜಣ್ಣ:—20 ಸೇರಿಗೆ?

ತಿಮ್ಮಣ್ಣ:—12 ಸೇರು 12 ಸೇರು? 24 ಸೇರು.

ಮಂಜಣ್ಣ:—ಈಗ ನಾಲ್ಕು ಸೇರು ಉಂಟು. ಹಾಗಾದರೆ ನಾನು ಮಾರಿದ್ದು?

ತಿಮ್ಮಣ್ಣ:—20 ಸೇರು.

ಮಂಜಣ್ಣ:—ಸೇರಿಗೆ ಒಂದಾಣೆಯಂತೆ ಮಾರಿದೆ. ಯಾರೂ ಒಂದು ಕಾಸೇನಾದರೂ ಪರಾಮರ್ಶೆಯಿಂದ ಹೆಚ್ಚು ಕೊಡಲಿಲ್ಲ. ಎಂದ ಮೇಲೆ ನನ್ನ ಕೈಯಲ್ಲಿ ಎಷ್ಟು ದುಡ್ಡಾಗಬೇಕು.

ತಿಮ್ಮಣ್ಣ:—20 ಆಣೆ; ಒಂದು ರೂಪಾಯಿ ನಾಲ್ಕಾಣೆ!

ಮಂಜಣ್ಣ:—ಅದೇ ಈಗ! ಒಂದು ರೂಪಾಯಿ ಎಂಟಾಣೆ ಉಂಟು! ಕೆಲವು ದೇವಸ್ಥಾನಗಳಲ್ಲಿ ದೇವರು ಬೆಳೆಯುವಂತೆ ನನ್ನ ಖರ್ಜೂರವೇ ಇದ್ದಕ್ಕಿದ್ದ ಹಾಗೆ ಬೆಳೆಯಿತೆ? ಈ ಖರ್ಜೂರಕ್ಕೆ ಪೂಜೆ ಮಾಡಲೆ? ಕಲ್ಲು ಕುಟ್ಟಿಗನಿಗೆ ಹಣ್ಣುಕಾಯಿ ಮಾಡಲೆ? ಯಾರಿಗೆ ಹರಕೆ ಮಾಡಲಿ!

ತಿಮ್ಮಣ್ಣ:—(ಆಲೋಚಿಸುತ್ತ) ತಡೆ, ಹೇಳುತ್ತೇನೆ. ಮೊದಲಾಗಿ ಹೇಳು—ನೀನು ಬೆಳಗ್ಗೆಯಿಂದ ಈ ವರೇಗೂ ಎಲ್ಲಿ ಕೂತಿದ್ದೆ?

ಮಂಜಣ್ಣ:—ದೂಳೀಗಲ್ಲಿಯಲ್ಲಿ!

ತಿಮ್ಮಣ್ಣ:—ಸರಿ, ಆ ಮಾರ್ಗದಲ್ಲಿ ಮೋಟರ್ ಕಾರುಗಳು ಓಡುತ್ತಿದ್ದುವೆ?

ಮಂಜಣ್ಣ:—ಅವುಗಳಿಗೆ ಗಡಿಮಿತಿಯುಂಟೆ? ಕ್ಷಣಕ್ಷಣಕ್ಕೂ ಅತ್ತ ಇತ್ತ—"ಪೇಂಕ್, ಪೇಂಕ್" ಮಾಡುತ್ತಲೇ ಇದ್ದುವು.

ತಿಮ್ಮಣ್ಣ:—ಹಾಗಾದರೆ, ಮಂಜಣ್ಣಾ, ನೀನು ಪೂಜೆಮಾಡಬೇಕಾದ್ದು ಖರ್ಜೂರಕ್ಕೂ ಅಲ್ಲ, ಕಲ್ಲು ಕುಟ್ಟಿಗನಿಗೂ ಅಲ್ಲ! ಆ ಮೋಟಾರ್ ಕಾರುಗಳಲ್ಲಿ ಕೂತುಕೊಂಡು ಓಡುವ ಮಹಾರಾಯರುಗಳಿಗೆ! ಇನ್ನಷ್ಟು ಕಾರ್‍ಗಳು ಹೆಚ್ಚಾಗಲೆಂದು ದೇವರಿಗೆ ಹರಕೆ ಹೇಳಿಕೊ!

ಮಂಜಣ್ಣ:—ಯಾಕಪ್ಪಾ! ಅದಕ್ಕೂ ಇದಕ್ಕೂ ಏನು ಗಂಟು!

ತಿಮ್ಮಣ್ಣ:—ನಿನ್ನ ಅಂಟು ಖರ್ಜೂರಕ್ಕೂ ಅವರ ಕಾರಿನಿಂದೇಳುವ ದೂಳಿಗೂ ಗಂಟು! ನಿನ್ನ ಅಂಟು ಮುದ್ದೆ ಖರ್ಜೂರವು ಸೋಳೆಸೋಳೆಯಾಗಿ ಕಾಣಲೆಂದು ಕ್ಷಣಕ್ಷಣಕ್ಕೂ ಅದನ್ನು ಬಿಡಿಸುತ್ತಾ ಮಗುಚುತ್ತಾ ಇದ್ದೆ, ದೂಳು ಬಂದು ಅದರಲ್ಲಿ ಬೆರೆಯುತ್ತಾ ಇತ್ತು. ಮಂಜಣ್ಣಾ, ನಿನ್ನ ಖರ್ಜೂರ ಬೆಳೆಯಲಿಲ್ಲ—ಅದಕ್ಕೆ 4 ಸೇರು ದೂಳು ಬಂದು ಸೇರಿತು. ಅಷ್ಟೆ! ಸರಿ, ತಕ್ಕೊಂಡು ತಿಂದರು. ದೊಡ್ಡವರ ಸವಾರಿಯ ಡೌಲು, ಬಡವರ ಬಾಯಿಗೆ ದೂಳು!

ಮಂಜಣ್ಣ:—ಈಗ ತಿಳಿಯಿತು. ಹಾಗೆಯೇ ಆಗಿರಬೇಕು. ಇನ್ನು ನಾಳೆ ಮಾತಾಡೋಣ!

ತಿಮ್ಮ:—ಏನು? ಇನ್ನೂ 4 ಸೇರು ಖರ್ಜೂರವಿದೆಯಲ್ಲ? ವ್ಯಾಪಾರವು ದಿಲ್ಲವೆ?

ಮಂಜಣ್ಣ:—ಅದಕ್ಕೆ ಬೆಳಗ್ಗೆಯೇ ಗಿರಾಕಿಯಾಗಿದೆ. ಅಲ್ಲಿ ಕೊಟ್ಟು ಹೋದರಾಯಿತು. ಗಿರಾಕಿಯಾದ್ದು ಬಿಟ್ಟು ಇಲ್ಲೇಕೆ ಕಾಯಬೇಕು?

ತಿಮ್ಮ:—ನಿನ್ನ ಖರ್ಜೂರವನ್ನು ಬೆಳಗ್ಗೆ ತೆಗೆದುಕೊಳ್ಳದೆ ಸಾಯಂಕಾಲಕ್ಕೆ ಸಾಟಿ ಮಾಡಿ ಇಟ್ಟವರು ಯಾರಪ್ಪ?

ಮಂಜಣ್ಣ:—ಇಲ್ಲೇ ಸಮೀಪ ಆ ಪಚೀತಿಗಲ್ಲಿಯ ಅಪ್ಪಿರಂಗಿ.

ತಿಮ್ಮಣ್ಣ:—ಮಂಜಣ್ಣಾ! ದಮ್ಮಯ್ಯಾ ಮಹಾರಾಯ! ಈಗ ಕತ್ತಲಾಗುವಾಗ ಅಲ್ಲಿಗೆ ಹೋಗಬೇಡ. ಸಾಯಂಕಾಲದ ಸಾಟಿಯ ಗುಟ್ಟು ಈಗ ಗೊತ್ತಾಯಿತು! ನಿನಗೂ ಬಲೆ ಬೀಸಿದಾಳೆಯೆ? ಸರಿ 'ಮಂಜ

ಣ್ಣಯ್ಯಾ, ಸಾಯಂಕಾಲ ಹೋಗುವಾಗ ಇತ್ತಲಾಗಿಂದ ಬನ್ನಿ, ಖರ್ಜೂರ ಬೇಕು' ಬನ್ನೀ ಬನ್ನೀ ಕಾದು ಕೂತುಕೊಳ್ಳುತ್ತೇನೆ' ಎಂದು ವೈಯಾರದಿಂದ ಹೇಳಿದ್ದಳು. ನೀನು ನಂಬಿದ್ದೆ ಅಲ್ಲವೆ? ಹೋಗು—ಕೈಯಲ್ಲಿದ್ದ ಒಂದೂವರೆ ರೂಪಾಯಿಯೂ ಇಲ್ಲ. ಖರ್ಜೂರವೂ ಇಲ್ಲ—ನಾಳೆ ಆಸ್ಪತ್ರೆಯೇ ಗತಿ!

ಮಂಜಣ್ಣ:—ಹಾಗೆ ಹೇಳಿದಳೆಂದು ನಿನಗೆ ಹೇಗೆ ಗೊತ್ತಾಯಿತು?

ತಿಮ್ಮಣ್ಣ—ನನಗೂ ಹಾಗೇ ಹೇಳಿದ್ದಳು. ನಾನು ನಂಬಿ ಕೆಟ್ಟೆ. ಸಾಯಂಕಾಲ ಮಾರದೆ ಉಳಿದ ಸೇಕರ್ ಮಿಠಾಯಿಗೊಂದು ಸಾಟಿ ಉಂಟೆಂತ—ಈಗ ನೀನು ಹೋಗುವಂತೆ—ನಾನೂ ಹೋಗಿ ಈ ಅವಸ್ಥೆಗೆ ಬಂದೆ! ನೋಡು, ಈ ಹುಣ್ಣುಗಳು! ಇಷ್ಟು ಮಾತ್ರ ತಾನೆ? ಮೂರು ತಿಂಗಳು ಆಸ್ಪತ್ರೆಯಲ್ಲಿದ್ದೆ! ಅಯ್ಯೋ! ಆಗಿನ ನನ್ನ ನರಕಯಾತನೆಯನ್ನು ಯೋಚಿಸಿದರೆ ಮೈ ಈಗಲೂ ಜುಮ್ ಎನ್ನುವುದು. ಪೈಲ್ವಾನ್‌ನಂತೆ ಗಟ್ಟಿಮುಟ್ಟಾಗಿದ್ದ ನಾನು ಈಗ ಹೇಗಾಗಿದ್ದೇನೆ ನೋಡು! ನನ್ನ ಬಾಳು ಹಾಳಾಯ್ತು! ನಿನ್ನ ಖರ್ಜೂರ ಮಾರಾಟವಾಗದಿದ್ದರೆ ಉಪವಾಸವಾದರೂ ಬೀಳು! ಅವಳ ಆ ಸಾಯಂಕಾಲದ ಸಾಟಿಗೆ ಮಾತ್ರ ಮರುಳಾಗಬೇಡ!

ಮಂಜಣ್ಣ:—ಏನು? ಅವಳಿಗೆ ಅಂತಹ ಭಯಂಕರರೋಗಗಳಿರುವುವೆ? ನೋಡಲಿಕ್ಕೆ ದುಂಡುದುಂಡಾಗಿದ್ದಾಳೆ!

ತಿಮ್ಮಣ್ಣ:—ಮಂಜಣ್ಣಾ, ಸ್ವಲ್ಪ ಕೂತುಕೊ, ಎಲ್ಲ ಹೇಳುತ್ತೇನೆ. ಈ ಸೂಳೆರು ದುಂಡುದುಂಡಗಾಗಿ ಚಂದವಾಗುವುದೇ ರೋಗ ಹಿಡಿದ ಮೇಲೆ. ಕೊಳೆತ ಕುಂಬಳಕಾಯಿಯಂತೆ ಹೊರಗೆಲ್ಲಾ ಸರಿ—ನಾನು ತಿಳಿಯದೆ ಕೆಟ್ಟೆ! ನೀನು ತಿಳಿದೂ ಕೆಡಬೇಡ, ಜೋಕೆ! ಜೋಕೆ! ಈ ಅಪ್ಪಿರಂಗಿ ವಿಷಯ ಮಾತ್ರ ನಾನು ಹೇಳುತ್ತೇನೆಂತ ತಿಳಿಯಬೇಡ. ದೊಡ್ಡ ಸೂಳೇರು, ಭಾರೀ ಸೂಳೇರು, ಸಣ್ಣ ಸೂಳೇರು—ತುಂಡು ಸೂಳೇರು—ಗುಟ್ಟಿನ ಸೂಳೆರು—ಎಲ್ಲರೂ ಒಂದೇ. ಬಿಳೀ ಕಾಗೆ ಸಿಕ್ಕೀತು, ಅತ್ತೀ ಹೂ ಸಿಕ್ಕೀತು, ಆದರೆ ರೋಗವಿಲ್ಲದ ಸೂಳೆ ಸಿಕ್ಕಲಿಕ್ಕಿಲ್ಲ! ಸೂಳೆಯೆಂದರೆ ಕಾಫಿ ಹೊಟೆಲಿನಲ್ಲಿ ಕಪ್ಪು ತೊಳೆಯುವ ನೀರಿನ ಬಾಲ್ದಿಯಂತೆ! ಊರ ಕೆರೆಯಂತೆ! ಪಬ್ಲಿಕ್ ಲೇಟ್ರಿನ್‌ನಂತೆ!

ಮಂಜಣ್ಣ—ಆದರೆ ನಾನು ಖರ್ಜೂರದ ಮಾರಲಿಕ್ಕೆ ಹೋಗುವುದ ಲ್ಲವೆ? ಅವಳಿಗೆ ರೋಗವಿದ್ದರೆ ನನಗೇನು?

ತಿಮ್ಮಣ್ಣ:—ನಾನೂ ಹಾಗೇ ಯೋಚಿಸಿ ಹೋಗಿ ಕೆಟ್ಟೆ! ನಾನೇಕೆ ನೀನೇಕೆ? ಎಂತೆಂತಹ ದೊಡ್ಡ ಬುದ್ಧಿವಂತರೂ ಈ ಸಂಜೆ ಸಾಟಿಯ ಬಲೆಗೆ ಸಿಕ್ಕಿಬಿದ್ದಿದ್ದಾರಂತೆ! ಡಾಕ್ಟರ್, ವಕೀಲರು, ಜವಳಿ ಸಾಹುಕಾರ್, ಸರಾ ಫರು ಇಂಥವರೆಲ್ಲ ಈ ಗಾಳಕ್ಕೆ ಸಿಕ್ಕುತ್ತಾರಂತೆ! ನೀನು ಬೀಳುವುದು ದೊಡ್ಡದೆ?

ಮಂಜಣ್ಣ:—ಅದು ಹೇಗೆ ತಿಮ್ಮಣ್ಣಾ?

ತಿಮ್ಮಣ್ಣ:—ಕೇಳು ಹೇಳುತ್ತೇನೆ. ಯೋಚಿಸು—ಭಾರೀ ದೊಡ್ಡ ಸೂಳೆ ರಾತ್ರಿ 8 ಗಂಟೆಗೆ ತನಗೆ ಅಸ್ವಸ್ಥ—ಕಠಿಣ ಅಸ್ವಸ್ಥ—ಕೂಡಲೆ ಬರಬೇಕು ಎಂತ ಡಾಕ್ಟರರಿಗೆ ಜನ ಓಡಿಸುತ್ತಾಳೆ. ಡಾಕ್ಟರರು ಹೋಗ ಬೇಕೋ ಬೇಡವೋ?

ಮಂಜಣ್ಣ:—ಹೋಗದೆ ಇದ್ದರೆ ಅವರು ಡಾಕ್ಟರರೇ ಅಲ್ಲ.

ತಿಮ್ಮಣ್ಣ:—ಸರಿ. ಡಾಕ್ಟರರು ಹೋದರು. ಹೆಂಗಸರ ದೇಹ ಪರೀಕ್ಷೆಯಲ್ಲವೇ? ಬೇರೆ ಯಾರೂ ಇರಕೂಡದು. ಡಾಕ್ಟರರೂ ಅವಳೂ ಮಾತ್ರ ಆ ಕೋಣೆಯಲ್ಲಿ! ಅಗಲವಾದ ಮಂಚದ ಮೇಲೆ ಆಚೆ ಬದಿಯಲ್ಲಿ ಅವಳು ಮಲಗಿದ್ದರೆ ಡಾಕ್ಟರರು ಪರೀಕ್ಷೆ ಮಾಡುವುದು ಹೇಗೆ? ಮಂಚದಲ್ಲಿ ಅವಳ ಬಳಿಯಲ್ಲಿ ಕೂತುಕೊಳ್ಳಲೇಬೇಕು. ಆಗ ಅವಳು 'ಎದೆ ನೋವು—ಬದಿನೋವು, ಬೆನ್ನು ನೋವು, ಕಿಬ್ಬೊಟ್ಟೆ ನೋವು, ತೊಡೆ ನೋವು, ಕೆನ್ನೆ ನೋವು—ಅಲ್ಲಿ ಒತ್ತಿ ನೋಡಿ, ಇಲ್ಲಿ ಹಿಡಿದು ನೋಡಿ, ಕಣ್ಣು ಪರೀಕ್ಷೆ ಮಾಡಿ, ಬಾಯಿ ಪರೀಕ್ಷೆ ಮಾಡಿ' ಎಂದು ಉಟ್ಟುಕೊಂಡಿದ್ದ ಸಣ್ಣ ವಸ್ತ್ರದ ತುಂಡನ್ನು ಓರೆ ಓರೆ ಮಾಡಿ ಅಂಗಾಂಗಗಳ ಸೌಂದರ್ಯವನ್ನು ಬೀರಿ ಲಜ್ಜೆ ವೈಯ್ಯಾರಗಳನ್ನು ತೋರಿ, ಕಣ್ಣಿನಿಂದಲೂ ಮುಗುಳು ನಗೆ ಯಿಂದಲೂ ನಾಲ್ಕು ಬಾಣ ಹೊಡೆದಳೆಂದರೆ ಬೀಳದ ಮೃಗ ಬೀಳಲೇ ಬೇಕು! visiting fees ಪಡೆಯುವ ಆಶೆಯಿಂದ ಹೋದ ಡಾಕ್ಟರರು ತಾನೇ ವಿಸಿಟಿಂಗ್ ಫೀಸ್ ಕೊಟ್ಟು—ಪುನಃ ಪುನಃ ವಿಸೀಟ್ ಕೊಟ್ಟು

ಕಡೆಗೆ ಕಟ್ಟು ಬರುವರು! ರೋಗಗಳ ಭಯಂಕರ ಸ್ಥಿತಿಯನ್ನು ತಿಳಿದ ಡಾಕ್ಟರರೇ ಅನೇಕ ವೇಳೆ ಇಂತಹ ಬಲೆಗೆ ಬೀಳುವಾಗ ಜವಳೀ ಸಾಹುಕಾರರು, ಚಿನ್ನದ ವ್ಯಾಪಾರಿಗಳು ಇವರನ್ನು ಕಡೆ ಹಾಕುವುದು ದೊಡ್ಡದೆ? 150 ರೂಪಾಯಿಯ ಸೀರೆ ತಕ್ಕೊಳ್ಳಬೇಕೆಂದಿದೆ, 500 ರೂಪಾಯಿಯ ವಜ್ರದ ಉಂಗುರ ಬೇಕೆಂದಿದೆ, ನನಗೆ ಬರಲಿಕ್ಕೆ ನಾಚಿಕೆ ಆಗುತ್ತದೆ. ದಯಮಾಡಿ ನಮೂನೆವಾರು ಹಿಡಕೊಂಡು 8 ಗಂಟೆಗೆ ಬರಬೇಕು' ಎಂದು ಹೇಳಿಕಳುಹಿಸುವುದೇ ತಡ! ಲಾಭದ ಆಸೆಗೆ ಓಡಿ ಓಡಿ ಹೋಗುತ್ತಾರೆ. ಹೋದ ಮೇಲೆ ಸವಿ ಸವಿ ಮಾತು—ಒಲವು ಒಯ್ಯಾರ—ಗಾಯನ—ಕಾಫಿ ಟಿಪ್ಪಿನ್—ವೀಳ್ಯ, ಕೊನೆಗೆ 'ಇದು ಸರಿಯಾಗಲಿಲ್ಲ. ಈ ನಮೂನೆ ಬೇಡ—ಬೇರೆ ನಮೂನೆಯದಾಗಬೇಕು—ನಾಳೆ ಖಂಡಿತ ತರಬೇಕು—ಬರಬೇಕು—ನನ್ನಾಣೆ ಉಂಟು—ಬರಬೇಕು—ಕಾದುಕೂತುಕೊಳ್ಳುತ್ತೇನೆ ಹೀಗೆ ನಾಳೆ ಅಲ್ಲದಿದ್ದರೆ ನಾಡದಿನೊಳಗೆ ಮೃಗ ಬಳೆಯೊಳಗೆ ಬಿದ್ದೇ ಬಿಡುವುದು! ವಕೀಲರಿಗೆ ಗಿಲೀಟು ಹಚ್ಚಿಬಿಡುತ್ತಾರೆ! ಹೇಗೆಂಬೆಯಾ? 'ಏನೋ ಒಂದು ಅತ್ಯಗತ್ಯ ಆಲೋಚನೆ ಕೇಳಲಿಕ್ಕಿದೆ; ಬಹಳ ಜರೂರಿದ್ದು; ಖಾಸಗಿ; ಆಫೀಸಿಗೆ ಬರಲಿಕ್ಕೆ ಸಂಕೋಚವಾಗುತ್ತದೆ. ದಯಮಾಡಿ ಈಗಲೇ ಬರಬೇಕು' ಎಂತ 9 ಗಂಟೆಗೆ ವಕೀಲರಲ್ಲಿಗೆ ಜನ ಕಳುಹಿಸಿ ಬಿಡುವರು. 'ಏನೋ ಕ್ರಿಮಿನಲ್ ನಡೆದಿರಬೇಕು ಭಾರಿ ಫೀಸು ಸಿಕ್ಕುವ ಸಂದರ್ಭ' ಎಂತ ಬಾಯಿಕಳೆದುಕೊಂಡು ವಕೀಲರು ಹೋಗುವರು. ಅಲ್ಲಿ ಉಪಚಾರವೇ ಉಪಚಾರ—ನೆವನಕ್ಕೆ ಮಾತ್ರ ಯಾವುದೋ ಒಂದು ಜಾಡಿಗೆ ಚೀಟಿನ ವಿಷಯ ಏನೋ ಒಂದು ಪ್ರಶ್ನೆ—ಅಂತೂ ಕೊನೆಗೆ ಮೃಗ ಬಲೆಗೆ ಬಿತ್ತೆಂದಾದ ಮೇಲೆ 'ನಾಳೆ ಬರಬೇಕು—ಖಂಡಿತ ಬರಬೇಕು—ನನ್ನಾಣೆ ಉಂಟು—ಹೂಂ ಊಂ, ಬರಬೇಕು—ಕಾದು ಕೂತುಕೊಳ್ಳುತ್ತೇನೆ—ಕಕ್ಷಿಗಾರರ ನಡುವೆ ತಮಗೆ ನಮ್ಮಂತವರ ನೆನಪಾಗುತ್ತದೆಲ್ಲಿ? ಆದರೆ ನನ್ನಾಣೆ ಉಂಟು! ಬರಬೇಕು' ಎಂದು, ಮುಗಿಯಿತೆ? ಹೆಚ್ಚು ಕಡಿಮೆ ಇದೇ ರೀತಿಯಲ್ಲಿ ಎಂತೆಂತಹವರು ಈ ಸಂಜೆ ಸಾಟಿಗೆ ಸಿಕ್ಕಿಬೀಳುವಾಗ ಎಳೆಪ್ರಾಯದ ಹುಡುಗರನ್ನು ಒಂದೇ ಒಂದು ನೋಟದಿಂದ ಎದೆ ತಳಮಳ ಮಾಡಿ ತಮ್ಮ ಬಗಲೊಳಗೆ ಹಾಕಿಕೊಳ್ಳುವುದು ಅವರಿಗೊಂದು ಕ್ಷಣದ ಲೀಲೆ—ಮಂಜ

ಣ್ಣಾ, ಆದುದರಿಂದ ಜಾಗ್ರತೆ! ಜಾಗ್ರತೆ! ಎಷ್ಟೇ ಬುದ್ಧಿವಂತನಾಗಲಿ! ಅವರ ಬಳಿಗೆ ಒಮ್ಮೆ ಹೋದನೆಂದರೆ ಕೂಡಲೆ ಬುದ್ಧಿನಾಶ, ಅನಂತರ ಧನ ನಾಶ, ಆ ಮೇಲೆ ದೇಹನಾಶ–ಇಷ್ಟು ಮಾತ್ರವೇ? ಪಿತ್ರಾರ್ಜಿತ ಹಾಗೂ ಸ್ವಾರ್ಜಿತ ಆಸ್ತಿಪಾಸ್ತಿಗಳನ್ನು ಈ ಸೂಳೆಯರ ಎದೆ ಮೇಲೆ ಹಾಕಿ ಕೊನೆಗೆ ಪ್ರತಿಫಲ ರೂಪವಾಗಿ ತಾನು ಪಡೆದ ತರತರದ ರೋಗಗಳನ್ನು ತನ್ನ ಹೆಂಡತಿಯ ಮೂಲಕ ಸಂತಾನ ಪಾರಂಪರ್ಯದ ರಕ್ತದಲ್ಲೇ ತುಂಬಿಸಿ ಬಿಡುವರಂತೆ! ಹೀಗೆ ಆ ಬಡ ಸಂಸಾರಕ್ಕೆ ಪಿತ್ರಾರ್ಜಿತವೆಂದು ಸಿಗುವುದು ಈ ರೋಗಗಳು ಮಾತ್ರ! ತಿಳೀತೆ. ಎಷ್ಟೋ ಮಕ್ಕಳ ಕಣ್ಣು ದೋಷ, ಕುರುಡುತನ, ಕಿವುಡುತನ, ಬುದ್ಧಿಮಾಂದ್ಯ, ವ್ರಣ ಶರೀರ ಇವೆಲ್ಲವೂ ಅವುಗಳ ಪಿತ್ರಾರ್ಜಿತ ಪ್ರಸಾದವಂತೆ! ಪಿತ್ರಾರ್ಜಿತ ಪ್ರಸಾದ! ಮೊನ್ನೆ ಆರೋಗ್ಯ ವರ್ಧಕ ಸಭೆಯವರೊಬ್ಬರು ಈ ವಿಷಯ ಲೆಕ್ಚರ್ ಕೊಡುತ್ತಿದ್ದರು. ಅದನ್ನು ಕೇಳಬೇಕಿತ್ತು ನೀನು!

ಮಂಜಣ್ಣ:—ಸರಿ,—ಈಗ ಗೊತ್ತಾಯಿತು, ಇಷ್ಟೆಲ್ಲಾ ವಿಷಯ ನಿನಗೆ ಹೇಗೆ ತಿಳಿಯಿತೆಂದು, ಮೊದಲು ಅನುಭವಿಸಿದ ಮನಸ್ಸಿಗೆ ಲೆಕ್ಚರ್ ನವರ ಪ್ರತಿಯೊಂದು ಮಾತು ಹೌದೆಂದು ಕಂಡಿತು. ಅಲ್ಲವೆ? ಅವರ ಮಾತುಗಳನ್ನು ನಿನ್ನ ಅನುಭವದ ಒರೆಗಲ್ಲಿನಲ್ಲಿ ಹಾಕಿ ತಿಕ್ಕಿದೆ ರೂಪಾಯಿಗೆ ಹದಿನಾರಣೆ ಮಾತು, ಎಂತ ತಿಳಿದುಬಂತು. ಇಷ್ಟೆಲ್ಲಾ ತಿಳಿದುಕೊಂಡೂ ನಾನು ಆ ಸುಜೆ ಸಾಟಿಗೆ ಹೋದೆನೆ? ಖರ್ಜೂರ ಮಾರಾಟವಾಗದಿದ್ದರೆ ನಾಳೆ ಆಗುತ್ತದೆ. ಇಲ್ಲೇ ಕೂತುಕೊಳ್ಳುತ್ತೇನೆ. ಇದೇನು? ತಿಮ್ಮಣ್ಣಾ, ಇನ್ನೂ ಇಷ್ಟು ಸೇಕರ್ ಮಿಠಾಯಿ ಉಳಿದಿದೆ. ನಿಜವಾಗಿಯೂ ಇದು ಬೆಳಗ್ಗೆ ತಂದುದಲ್ಲ. ಒಂದು ಸರ್ತಿ ತಂದದ್ದು ಕಚಾರ್ಗಿ ಎರಡನೇ ಸಲ ತಂದದ್ದಾಗಿರಬೇಕು.

ತಿಮ್ಮಣ್ಣ:—ಹ ಹ್ಹ ಹ್ಹಾ! ನಿನ್ನ ಕಲ್ಲುಕುಟ್ಟಿಗನ ಚಮತ್ಕಾರದಂತೆ ನನಗೂ ಆಯಿತು—ಇಂದಿನ ವ್ಯಾಪಾರದಂತೆ ಇಷ್ಟರ ವರೇಗೆ ಆಗಲಿಲ್ಲ. ಇದು ಎರಡನೇ ಸಲ ತಂದದ್ದಲ್ಲ! 5ನೇ ಸಲದ್ದು! ನೋಡು ರೊಕ್ಕ! 5 ರೂಪಾಯಿಗೆ ಕಡಿಮೆ ಆದೀತೆ?

**ಮಂಜಣ್ಣ**:—ಅದೇನಪ್ಪಾ! ಇಂದು ಅಷ್ಟು ಸೇಕರ್ ಮಿಠಾಯಿ ಮಾಡಿದೆ?

**ತಿಮ್ಮಣ್ಣ**:—ಹೇಳುತ್ತೇನೆ, ಕೇಳು—ಇಂದು ಬೆಳಗ್ಗೆ ಸೇಕರ್ ಮಿಠಾಯಿ ಮಾಡಲಿಕ್ಕೆ ತೊಡಗಿದೆ. ಎಂದೋ ಅಗ್ಗದಲ್ಲಿ ಸಿಕ್ಕಿತೆಂದು ಜೋಲುಬೆಲ್ಲ ತಂದಿಟ್ಟಿದ್ದೆ. ಯಾವಾಗಲೋ ತಂದಿದ್ದ ಗೋದೀ ಹಿಟ್ಟು ಇತ್ತು. ಪಾಕಕ್ಕೆ ಪಾತ್ರ ಒಲೆಯ ಮೇಲಿಟ್ಟು ಬೆಲ್ಲ ಹೊಯಿದೆ—ಕುದಿಸಿದೆ. ಒಂದಿಷ್ಟು ಸೀರೂ ಹೊಯಿದೆ. ಮಗುಚತೊಡಗಿದೆ. ಗಟ್ಟಿ ಬೆಲ್ಲದ ಉಂಡೆಗಳಂತೆ ಏನೋ ತೋರಬಂದುವು; ಸಟ್ಟುಗದಿಂದ ಬಡಿದೆ; ಡುಂ, ಡುಂ ಎಂದಿತು. ಇದೇನು ಮಲಾಮತ್! ಇದೇನಪ್ಪಾ! ಎಂದು ಸಟ್ಟುಗದಿಂದಲೇ ಎತ್ತಿನೋಡಿದೆ! ನೋಡುವುದೇನು? ಒಂದು ಹೆಗ್ಗಣ! ಮತ್ತೊಂದು ಇಲಿ! ಇನ್ನೊಂದು ಮರಿ! ಏನು ಮಾಡಲಿ? ತೆಗೆದು ಬಿಸಾಡಲೆ? ಅವುಗಳ ಮೈಮೇಲಿನ ಬೆಲ್ಲದ ನಷ್ಟ ಯಾರು ಕೊಡುವುದು? ಕಡಿಮೆ ಎಂದರೆ ನಾಲ್ಕು ಸೇರು ಆದೀತು! ಒಂದಿಷ್ಟು ಸೀರು ತಂದು ಅವುಗಳನ್ನೆಲ್ಲ ಪಾತ್ರಕ್ಕೇ ತೊಳೆದು ಗಿವುಚಿ ಹಿಂಡಿ ಬಿಸಾಡಿಬಿಟ್ಟೆ!

ಪದ—ಆದಿತಾಳ.

> **ಬೆಲ್ಲದ ಪಾಕ—ಕುದಿಸಲು ಬಂತೈ ಹೆಗ್ಗಣ ಒಂದು.**
> **ಹಿಂದಿಲಿ ಹೆಂಡತಿಯೂ ನೋಡೋ.**
> **ಒಂದಕೆ ಕಾಲಿಲ್ಲ । ಮತ್ತೊಂದಕೆ ತಲೆಯಿಲ್ಲಾ ಲೇ ಲೇ ಲೇ ॥**
> **ಬೆಲ್ಲದ ಪಾಕ ಕುದಿಸಲು ಬಂತೈ ಹೆಗ್ಗಣ ಒಂದು ॥**

ಅನಂತರ ಬೆಲ್ಲ ಕುದಿಯತೊಡಗಿತು. ಆಗ ಮೇಲೆ ಬರತೊಡಗಿದುವು—ಎಕ್ಕಳೆಯ ರೆಕ್ಕೆಗಳು! ಎಕ್ಕಳೆಗಳು ಮಾತ್ರ ಕಾಣಸಿಗಲೇ ಇಲ್ಲ. ಎಲ್ಲಿಗೆ ಹೋಗಿದ್ದವೋ? ರೆಕ್ಕೆಗಳನ್ನೆಲ್ಲಾ ಸಟ್ಟುಗದಿಂದ ಬಳಿಗೆ ಮಾಡಿ ಬಾಚಿ ಬಿಸಾಡಿದೆ. ಆ ಮೇಲೆ ಹಿಟ್ಟು ಸುರಿದೆ! ಅನಂತರ ಗೊತ್ತಾಯಿತು, ಹಿಟ್ಟಿನಲ್ಲಿ ಹುಳ ಆಗಿತ್ತೆಂದು. ಆದರೆ ಅವುಗಳಿಂದ ತೊಂದರೆಯಿಲ್ಲ. ಚೆನ್ನಾಗಿ ಮಗುಚಿದರೆ ಸರಿಯಾಗಿ ಪಾಕ ಆಗಿಹೋಗುತ್ತವೆ. ಆದರೆ ಒಂದು ಮೋಸ ಆಯಿತು! ಹಿಟ್ಟು ಕಡಿಮೆಯಾಯಿತು! ಬೆಲ್ಲ ಹೆಚ್ಚಾಯಿತು. ಏನು ಮಾಡಲಿ! ಪಾಕವನ್ನು ಆ ಸಮಯದಲ್ಲಿ ಒಲೆಯ ಮೇಲೆ ಬಿಟ್ಟು

ಹಿಟ್ಟು ತರಲಿಕ್ಕೆ ಅಂಗಡಿಗೆ ಓಡುವುದೆ? ಎಲ್ಲ ಹಾಳಾಗಿ ಹೋದೀತು! ಏನು ಮಾಡುವುದು ಎಂತ ಯೋಚಿಸಿದೆ. ತಟ್ಟನೆ ಒಂದು ಉಪಾಯ ಹೊಳೆಯಿತು. ಫಕ್ಕನೆ ಜಗಲಿಯಿಂದ ಬೀದಿಗೆ ಹಾರಿದೆ; ಮೋಟಾರುಕಾರುಗಳ ಓಡಾಟದಿಂದ ನಯನಯವಾದ ದೂಳು ಯಥೇಷ್ಟವಿತ್ತು. ಒಂದಷ್ಟು ಗೋಚಿ ಪಾಕಕ್ಕೆ ಹಾಕಿ ಮುಗುಚಿಬಿಟ್ಟೆ! ಅವಲ್ ಪಾಕ ಬಂತು! ಆ ರೀತಿ ಪಾಕ ಈ ವರೇಗೆ ಆಗಲಿಲ್ಲ. ನೂರು ಮೂರು ಎಳೆದರೂ ತುಂಡಾಗಬೇಕೆ? ಒಮ್ಮೆ ತಂದೆ, ಮಾರಿದೆ; ಇನ್ನೊಮ್ಮೆ, ಮತ್ತೊಮ್ಮೆ. ಇದು 5ನೇ ಸಲದ್ದು. ಆದುದರಿಂದ ಇಂದು ನನ್ನ ತಲೆಯಲ್ಲಿ ದೂಳಿನ ಪ್ರತಾಪವೇ ಮತ್ತೊ ಮತ್ತೊ ತೋರುತ್ತದೆ. ಹಾಗಲ್ಲದಿದ್ದರೆ ನಿನ್ನ ಖರ್ಜೂರ ಹೆಚ್ಚಾದ್ದಕ್ಕೆ ಕೂಡಲೆ ಕಾರಣ ತಿಳಿಯುತ್ತಿತ್ತೆ?

ಮಂಜಣ್ಣ:—ಸರಿ, ಸರಿ—ಈಗ ಗೊತ್ತಾಯಿತು! ಹಾಗಾದರೆ ಇಂದು ಒಳ್ಳೆಯ ವ್ಯಾಪಾರ ನಮಗಾಗಿದೆ. ಇದಿಷ್ಟು ನಾಳೆ ಮಾರೋಣ. ಈಗ ಹೋಗೋಣವೆ?

ತಿಮ್ಮಣ್ಣ:—ಆಗಲಿ. ನಾಳೆಯೂ ಇಲ್ಲಿಗೇ ಬಾ. ಒಟ್ಟಿಗೆ ಕೂತುಕೊಳ್ಳೋಣ.

ಮಂಜಣ್ಣ:—ನಾಳೆ ಹೀಗೆ ಮಾಡಿದರೆ ಜುಲ್ಮಾನೆ! ಕೇಳಲಿಲ್ಲವೇ? ಆ ಆರೋಗ್ಯ ಪ್ರಚಾರ ಮಂಡಳಿಯವರ ಡಂಗುರ! ತಿಂಡಿ ಸಾಮಾನು ಮಾರುವವರು ಬೀದಿಯ ಬಳಿಯಲ್ಲಿ ಕೂತುಕೊಳ್ಳಬಾರದಂತೆ. ಕನ್ನಡಿಯ ಪೆಟ್ಟಿಗೆಯೊಳಗಿಟ್ಟುಕೊಂಡು ತಿರುಗಬೇಕಂತೆ. ಬೇಕಾದವರ ಮನೆಯೊಳಗೆ ಹೋಗಿ ಕೊಡಬೇಕಂತೆ. ಇದಕ್ಕೆ ತಪ್ಪಿದರೆ 50 ರೂಪಾಯಿ ವರೆಗೆ ಜುಲ್ಮಾನೆಯಾಗಲೀ 2 ತಿಂಗಳ ವರೇಗಿನ ಸಜೆಯಾಗಲೀ ಕೊಡುವ ಅಧಿಕಾರ ಅವರಿಗೆ ಸಿಕ್ಕಿದೆಯಂತೆ! ನಾನು ಕನ್ನಡಿಯ ಪೆಟ್ಟಿಗೆ ಮಾಡಿಸಲಿಕ್ಕೆ ನಿನ್ನೆಯೇ ಹಾಕಿದ್ದೇನೆ. ಕಾಫಿ ಹೋಟೆಲಿನವರಿಗೂ ಇವೇ ತರದ ಕಾನೂನು ಬರಲಿಕ್ಕಿದೆಯಂತೆ. ಕಾಫಿ ತಿಂಡಿಯಂಗಡಿಗಳೆಲ್ಲ ಮನೆಯೊಳಗೆ—ಬೀದಿ ಬದಿಯಲ್ಲಿ ಒಂದು ಸ್ಮಾನ್ ಬೋರ್ಡು ಮಾತ್ರ! ಅಂತೆ.

ತಿಮ್ಮಣ್ಣ:—ಹಾಗಾದರೆ ನನಗೂ ಒಂದು ಪೆಟ್ಟಿಗೆ ಆಗಬೇಕಾಯಿತು! ಹೂಂ, ಏಳು, ಹೋಗೋಣ—(ಇಬ್ಬರೂ ಏಳುವರು.)

ತಿಮ್ಮಣ್ಣ:—(ಹಾಡುತ್ತ) ಸೇಕರ್ ಮಿಠಾಯಿ ಮಿಠಾಯಿ ಸಿಹಿ ಬೆಲ್ಲದಿ! |

ಮಂಜಣ್ಣ:—(ಹಾಡುತ್ತ) ಸೇಕರ್ ಮಿಠಾಯಿ ಮಿಠಾಯಿ ಕಹಿ ಬೆಲ್ಲದಿ! |

ತಿಮ್ಮಣ್ಣ:—ತಿಂದ ಮೇಲೆ ಬಾಲರು ಮಾಡ್ವರ್ ತಕ್ಕ ತೈ. ||

ಮಂಜಣ್ಣ:—ತಿಂದ ಮೇಲೆ ಬಾಲರ ಹೊಟ್ಟೆ ಗುಳುಗುಳು ತೈ || ಹ ಹ ಹ್ಹಾ—ತಿಮ್ಮಣ್ಣಾ, ಆಗಿಸ ನಿನ್ನ ಅಡ್ಡ ಸೊಲ್ಲಿಗೆ ಇದೂ ಒಂದು ಅಡ್ಡ ಸೊಲ್ಲು! ಹ ಹ ಹ್ಹಾ (ಎನ್ನುತ್ತ ಹೋಗುವರು.)

---

## ದೃಶ್ಯ ೪—ಬಾಲಿಕಾ ಪಾಠಶಾಲೆ.

(ಶಾಲಾ ಬಾಲಿಕೆಯರು ಕೋಲಾಟಕ್ಕೆ ಸಿದ್ಧವಾಗಿ ನಿಂತಿರುವರು. ಉಪಾಧ್ಯಾಯಿನಿಯು ಕುಳಿತಿರುವಳು)

ಉಪಾಧ್ಯಾಯಿನಿ:—ಬಾಲಿಕೆಯರೆ, ಮೊನ್ನೆ ಆರೋಗ್ಯಸಂಜೀವಿನೀಯಮ್ಮನವರು ಬಂದು ನಿಮಗೆ ಕಲಿಸಿದ ಶಿಶುಪಾಲನಾ ಗೀತವನ್ನು ಹಾಡುತ್ತ ಕೋಲಾಟವಾಡಿರಿ.

(ಬಾಲಿಕೆಯರು ಹಾಡುತ್ತ ಕೋಲಾಟವಾಡುವರು.)

ಪದ—(ಭಾರತೆಯರೆ ನಮ್ಮ . . . ಎಂಬಂತೆ) ಮದಲಾಸಿ ಮಟ್ಟು ಚಾಪು-ತಾಳ.

**ಶಿಶುಸಪ್ತಾಹದ ದಿನ ಬಾಲೆಯರ್ಕೂಡಿ । ಶಿಶುಪಾಲನೆಯಕ್ರಮ ಪ್ರಚಾರಮಾಡಿ**
**|| ಪಲ್ಲ ||**

**ಸ್ತನ ಶಿಶುವಿಗೆ ದೇವನಿರ್ಮಿತಾಹಾರ । ತನುಬೆಳೆವಣಿಗೆಗೆ ಅದು ಸರ್ವಸಾರ ||**
**ಮಿತಿಯಿಂದ ಕ್ರಮದಿಂದ ಅನುಭವದಿಂದ । ಮೊಲೆಯುಣಿಸೆ ಮಗು**
**ಬೆಳೆವುದು ಸುಖದಿಂದ || ೧ ||**

**ಮೊಲೆ ಹಾಲು ಸಿಗದಿರೆ ಹಸುವಿನ ಹಾಲು । ತೆಳುಗೈದು ಬಿಸಿಗೈದು**
**ಕೊಡುವುದು ಮೇಲು ||**

ಪೇಟೆಯ ಪೇಟೆಂಟು ಹಾಲಿನ ಪುಡಿಯು । ಮಗುವನ್ನು ಪುಷ್ಟಿಗೈಯದು
ಬರಿ ಭ್ರಮೆಯು ॥ ೨ ॥

ಮಗು ಹಸಿವಿಗೆ ಮಾತ್ರ ಕೂಗುವುದಲ್ಲ । ತೆಗೆದುಣಿಸಲಾಗದು ಕೂಗಿದಾಗೆಲ್ಲ ॥
ಕೂಗಿನ ಕಾರಣ ತಿಳಿಯಲು ಬೇಕು । ಶಿಶು ಮನವನು ತಿಳಿಯೆ
ತಾಳ್ಮೆಯು ಬೇಕು ॥ ೩ ॥

ಬೇಗೆಯು ಬೇನೆಯು ಕತ್ತಲೆ ಕೋಣೆ । ಕಟ್ಟಿಟ್ಟ ಗಾಳಿಯು ಚುಚ್ಚುವ ತಗಣೆ ॥
ಹೆಟ್ಟುವ ಹಾಸಿಗೆ ಭಾರದ ಹೊದಿಕೆ । ಪಟ್ಟು ಹಿಡಿದು ಮಗು
ಕೂಗುವುದಿವಕೆ ॥ ೪ ॥

ಮೊಲೆಯೀವ ತಾಯಿಯು ಹಾಲೀವ ಪಶುವು । ಸಿರೋಗಿಯಾಗಿರೆ
ಶಿಶುವಿಗೆ ಸುಖವು ॥
ಮಗುವಿನ ಬಾಯಿಗೆ ಮುದ್ದಿಡುವ ಜನರ । ಜೊಲ್ಲಿನ ರೋಗಾಣು
ಸೇರ್ವುದು ಶಿಶುವ ॥ ೫ ॥

ಕೆಮ್ಮುವ ರೋಗಿಯ ಬಳಿಯಲ್ಲಿ ಶಿಶುವ । ದಮ್ಮಯ್ಯ ಬಿಡಬೇಡಿ
ಕೊಲ್ವಿರಿ ಮಗುವ ॥
ಗುಮ್ಮ ಬೇತಾಳ ಭೂತವು ಬಂತುಯೆಂದು । ಎಳೆ ಹೃದಯದಿ
ಭಯ ನಡಬೇಡಿರೆಂದು ॥ ೬ ॥

ಸಕ್ಕರೆ ಮುಂತಾದ ಸಿಹಿ ತಿಂಡಿಯಧಿಕ । ಅಕ್ಕರೆಯಿಂದೀಯೆ ಕೆಡುವುದು ಸೌಖ್ಯ ॥
ಬಿಸ್ಕೀಟು ಹಲ್ಲಿನ ವಸಡಿಗೆ ಅಂಟು । ಮಕ್ಕಳ ಹಲ್ಲು ನೋವಿಗೆ
ಅದು ಗಂಟು ॥ ೭ ॥

ಸಡಿಲಾದ ಉಡಿಗೆಯ ತೊಡಿಸಲು ಬೇಕು । ಮಡಿಯಾದ ಹಾಸಿಗೆ
ಮಲಗಲು ಬೇಕು ॥
ತೊಯ್ದಿಹ ಅರಿವೆಯ ಕೊಳಕಾದ ಉಡಿಗೆ । ಹುದುಗಿಸಿಯಿಡಬೇಡಿ
ಹಾಸಿಗೆಯಡಿಗೆ ॥ ೮ ॥

ನಡೆಯುವ ಮೊದಲಾಗಿ ನಡೆಸುವ ಮಂಕು । ಬಿಡದೆಗೈವುದು ಶಿಶುವಿನ
ಕಾಲ ಡೊಂಕು ॥
ಕುಳಿತುಕೊಳ್ಳುವ ಮೊದಲಾಗಿ ಕುಳ್ಳಿರಿಸೆ । ಬಳುಕುವ ಬೆಂಗೋಲು
ಬಾಗುವದೈಸೆ ॥ ೯ ॥

# ತೃತೀಯಾಂಕ.

## ದೃಶ್ಯ ೧.

(ಮದ್ಯಪಾನದ ತೃತೀಯಾವಸ್ಥೆ)

(ಸುರೇಂದ್ರನು ಮಲಿನವಾದ ಹರಕು ಕೋಟನ್ನು ಹಾಕಿಕೊಂಡು ಪ್ರವೇಶಿಸುವನು—ನೋಡಿದರೆ ಹುಚ್ಚನಂತೆ ಕಾಣುವನು. ಕುಡಿತದಿಂದ ಮತ್ತನಾದವನಂತೆ ಅಸ್ಥಿರವಾದ ಹೆಜ್ಜೆಗಳನ್ನಿಡುವನು. ಕಿಸೆಯಲ್ಲೊಂದು ಬಾಟ್ಲಿ—ಕೈಯಲ್ಲೊಂದು ಬಾಟ್ಲಿ! ತಡವರಿಸಿ ಮಾತುಗಳು.)

ಸುರೇಂದ್ರ:— ಪದ—ಏಕತಾಳ.

ನನಗೇನಾದರು—ಕಡಿಮೆಗಳಿಲ್ಲ—ಸರಿಯಾರೆನಗೀಗ । ಅಹಾಹಾ ।
ಸುರೆಯೆಂಬಾಕೆ ಮೋಹಿಪಳೆನ್ನ ।
ಮೀರುವರುಂಟೆ ಧರಣಿಯೊಳೆನ್ನ ।
ತರತರದಲಿ ಸುಖಿಸುವಯೆನ್ನ ।
ನಾನೇ ನೋಡಿರಿ ಇಂದ್ರಾ । ಅಹಾಹಾ ।

ಇಂದು ಅಲ್ಲೊಬ್ಬ "ಹೆಂಡ ಕೆಟ್ಟದು" ಎಂದು ಲೆಕ್ಚರ್ ಮಾಡುತ್ತಿದ್ದ. ಅವನ ಆ ಗೊಡ್ಡು ತಲೆಬುರುಡೆಯ ಮೇಲೆ ಈ ಬಾಟ್ಲಿಯನ್ನೇ ಒಡೆದು ಅವನಿಗೆ ಸುರಾಭಿಷೇಕಮಾಡಬೇಕೆಂದು ಮುಂದೆ ನುಗ್ಗಿದೆ. ಅಲ್ಲಿದ್ದವರು ನನ್ನನ್ನೇ ದೂಡಿಬಿಟ್ಟರು! ಆಂ! ಏನನ್ಯಾಯ! ಹೆಂಡ ಒಳ್ಳೇದೋ ಕೆಟ್ಟದೋ ಹೇಳಬೇಕಾದರೆ ಕುಡಿದು ನೋಡಬೇಕು! ಸ್ವಂತ ಅನುಭವವಿಲ್ಲದವರು ಲೆಕ್ಚರ್ ಕೊಟ್ಟರೆ ಏನು ಪ್ರಯೋಜನ! All bookish! all imaginary ಅವನು ಹೇಳುತ್ತಾನೆ! ಹೆಂಡ ಕುಡಿಕರಿಗೆ ಪ್ರೇಮವೇನೆಂದು ಗೊತ್ತಿಲ್ಲ---ಅಂತ. ಆ ಪ್ರೇಮದಲ್ಲಿ ಏನಿದೆ! ಏನು ಸ್ವಾರಸ್ಯವಿದೆ? ಪ್ರೇಮದ ದೆಸೆಯಿಂದ ರಾಜನೂ ಗುಲಾಮನಾಗುವನು; ಆದರೆ ಸುರೆಯ ಪ್ರಭಾವದಿಂದ ಗುಲಾಮನೂ ಕೂಡ ರಾಜನಂತೆ ಸ್ವತಂತ್ರನಾಗುವನು!

ಸ್ವರಾಜ್ಯಪ್ರಾಪ್ತಿಗೆ, ಸ್ವಾತಂತ್ರಪ್ರಾಪ್ತಿಗೆ—ಈ ಸುರೆಯೇ ಸಾಧನ! ಈಗ ನಾನೇ ರಾಜ!

ಪದ—ಆದಿತಾಳ. (ಹಿಂದುಸ್ಥಾನಿ ಮಟ್ಟು)

ಧರಿತ್ರಿಗೀಗಾ—ನಾನೇ ರಾಜಾ—ಠೀವಿಯಿಂದ ಪೋಗುವೆ ॥
ಅಮರಸುಖವ—ಸೀವ ಸುರೆಯಾ ವಾಸವೆನ್ನ—ನಾಲಗೆ ॥
ರಾಜತನವೂ—ತೋರದಿರುವ—ಭಾರಿ ಸುಖದಿ—ನಾನಿಹೆ ॥

ಪ್ರೇಮವು ಯಾಚಕತ್ವವನ್ನು ಬೋಧಿಸುವುದು. ಹಂಡವಾದರೋ ಜಗತ್ತನ್ನೇ ಧಿಕ್ಕರಿಸುವ ಶಕ್ತಿಯನ್ನು ಕೊಡುವುದು. ಪ್ರೇಮದಿಂದ ಏನೂ ತೋಚದಂತಾಗುವುದು—ಆದರೆ ಸುರೆಯಿಂದ ಕಲ್ಪನಾಶಕ್ತಿ ಉದ್ರೇಕಗೊಳ್ಳುವುದು. ನೋಡಿ, ನನ್ನ ಈ ಲೆಕ್ಚರಿಗೆ ಅವನ ಲೆಕ್ಚರ್ ಸರಿಯೆ? ಪ್ರೇಮದಿಂದ ಲಾಭ ಹೊಂದಿದರೂ ಅದೊಂದು ಸ್ತ್ರೀ ಲಾಭ! ಆದರೆ ಸುರಾಪಾನದಿಂದ ತಾನೇ ಕಾಂತಿಯುಕ್ತಳಾದ ಸ್ತ್ರೀಯೆಂದೂ ತಿಳಕೊಳ್ಳಬಹುದು. ಈಗ ನಾನು ಸ್ತ್ರೀ—ವೈಯಾರಿ, ಸುಂದರೀಮಣಿ! (ಎಂದು ಬಿನ್ನಾಣ ಮಾಡುತ್ತ ಕುಣಿಯತೊಡಗುವನು.)

ಪದ— ದಾದರತಾಳ

ಕಾಂತಿಯು ನೀವುದು—ಕಂದಿದ ಮೋರೆಗೆ ॥ ಒಂದು ಗುಟುಕು ಕುಡಿದರೆ ಚಿಂತೆ ॥
ಬತ್ತಿಸೋದು—ಹಂಡ । ಕುಡಿದರೆ ತೋರ್ವುದು ಸ್ವರ್ಗದ ಮಹಾತ್ಮೆ ॥ ೧ ॥
ಹೆಣ್ಣಿಗಿಂತ ನೂರು ಪಾಲು ಹೆಚ್ಚು ಸುಖ ತೋರು ತೈತೆ । ಯಾಕಪ್ಪ
ಹೆಣ್ಣಿಗೆ ಕಷ್ಟವ ಬಿಡುವದು ॥

ಆಂ, ಏನು ಹೇಳಿದೆ! ಎಷ್ಟು ಕುಡಿದರೂ ತಲೆಗೇರುವುದೇ ಇಲ್ಲ! ಕಲ್ಪನಾಶಕ್ತಿ ಬರುವುದೇ ಇಲ್ಲ! ಕ್ಷಣದೊಳಗೆ ಇಳಿದುಬಿಡುತ್ತೆ (ಎಂದು ಕುಡಿಯುವನು) ಇದೇನು ರುಚಿ! ಅಮೃತ! ಹಹ್ಹಹಾ! ಅಮೃತ! ಹಾಂ! ನೆನೆಪಾಯಿತು! ಆ ಲೆಕ್ಚರಿನವನು ಹೇಳುತ್ತಾನೆ—ಕುಡಿಕನು ಅವಿಶ್ವಾಸಿ, ಸುಳ್ಳುಗಾರ, ಚಾಡಿಗಾರ—ಕಳ್ಳ—ಕೊಲೆಪಾತಕಿ ಎಂದು. ಎಲ್ಲಾ ಸುಳ್ಳು, ಸುಳ್ಳು! ಕೊಲೆ ಮಾಡಿದ್ದರೂ ಮದ್ಯವು ತಲೆಗೇರಿದಾಗ ಅದನ್ನು ಹೇಳಿಬಿಡುವ ಸತಂಭಟ್ಟನೆಂದರೆ ಸುರಾಪಾನಿಯೇ ಸರಿ! ಮನಸ್ಸಿನಲ್ಲಿಯೂ ಬಾಯಿಯಲ್ಲಿಯೂ ಒಂದೇ ರೀತಿ ಇರುವುದು ಅವನಿಗೇ ಸರಿ! ಇನ್ನು ಚಾಡಿಗಾರನಂತೆ!

ಹೇಗೆ? ಯಾರು ಏನು ಹೇಳಿದರೆಂಬುದರ ಜ್ಞಾಪಕವಿದ್ದರಲ್ಲವೆ ಚಾಡಿ ಹೇಳುವುದು! ಕಳ್ಳತನ—ಅದು ಹೇಗೆ? ಕೇಳಿ, ಒಂದು ಸಣ್ಣ ಕಥೆ—ಒಂದು ಸಲ ನಮ್ಮ ಮದ್ಯದ ಬೈಟಕ್ಕಿನಲ್ಲಿ ಒಬ್ಬನು ನನ್ನ ಉಂಗುರವನ್ನು ಕದ್ದುಬಿಟ್ಟನು. ಆದರೆ ಅನಂತರ ಸುರೆಯು ಅಲ್ಲಕಲ್ಲೋಲತೆಯಲ್ಲಿ ತಲ್ಲೀನನಾದಾಗ ಅದನ್ನೆ ನನ್ನ ಹತ್ತಿರ ತಂದುಕೊಟ್ಟು—ಇಗೋ, ಇದು ನಾನು ಕಳವು ಮಾಡಿದ್ದು, ಭದ್ರವಾಗಿ ಇಟ್ಟಿರು!' ಎಂದು ಗಂಭೀರವಾಗಿ ಹೇಳಿದನು. ನಾನು ಉಂಗುರವನ್ನು ನೋಡಿ, ಅಣ್ಣಾ ಇದು ನನ್ನದಲ್ಲವೆ?' ಎಂದೆ. ಆಗ ನಮ್ಮಿಬ್ಬರ ನಗಾಟ! ಹಹ್ಹಹ್ಹಾ! ಯೋಚಿಸಿದರೇ ನಗೆ ಬರುತ್ತದೆ—ಹಹ್ಹ—ಹಹ್ಹಹ್ಹಾ—ಹಹ್ಹಹ್ಹಾಹ್ಹಾ! ನಾವಿಬ್ಬರೂ ಸಂತೋಷದಿಂದ ಒಬ್ಬರನ್ನೊಬ್ಬರು ತಬ್ಬಿಕೊಂಡು ನೆಲದ ಮೇಲೆ ಹೊರಳಾಡಿದೆವು. ಈ ಭ್ರಾತೃಪ್ರೇಮ Brotherhood ಯಾರಲ್ಲಿ ಬಂದೀತು! (ತಲೆಕೆರೆಯುವನು) ಆಂ. ಏನೆಂದೆ? ಎಲ್ಲಾ ಮರೆತು ಹೋಯಿತು! (ಹೆಂಡದ ಮತ್ತು ತೆ ಇಳಿದಂತೆ ತೋರಿಸಿಕೊಳ್ಳುವನು ಬಾಟ್ಲಿಗಳನ್ನು ನೋಡುವನು) ಇದೇನು? ಖಾಲಿ ಬಾಟ್ಲಿಯನ್ನೇ ತಂದೆನೆ? ಚೆನ್ನಾಗಿ ಕುಡಿದು ಇವುಗಳಲ್ಲಿ ತುಂಬಿಸಿಕೊಂಡು ಬರಬೇಕೆಂದು ಹೊರಟಿದ್ದೆ? ತುಂಬಿಸಿಕೊಂಡು ಬಂದಂತೆ ಸ್ವಲ್ಪ ನೆನೆಪಾಗುವುದು! ಏನೇ ಇರಲಿ, ಪುನಃ! ಅಲ್ಲಿಗೇ ಹೋಗಬೇಕು. (ಎಂದು ತಿರುಗುವನು—ಪರದೆಯೊಳಗಿಂದ ಹುಡುಗರ ನಗಾಟ ಕೇಳಿಬರುವುದು) ಯಾರದು? ವಿದ್ಯಾರ್ಥಿಗಳೆ! ಏನು, ಹೆಂಡಕುಡಿಕನೆಂಬಿರಾ? ಹೌದು, ಹೌದು, ಹೆಂಡಕುಡಿಕ ಹೌದು! ಈಗ ಮಾತ್ರ ಹೆಂಡ ಇಳಿದಿದೆ! ಹೆಂಡ ಕೆಟ್ಟದ್ದು—ಹೌದು—ಕೆಟ್ಟದ್ದು! ನಾನು ಕೆಟ್ಟೆ—ನೀವು ಕೇಡಬೇಡಿ! ಹೆಂಡ ಕುಡಿಕನಾದರೂ ನಿಮಗೊಂದು ಬುದ್ಧಿವಾದ—ನನ್ನ ಸ್ವಂತ ಅನುಭವದ ಬುದ್ಧಿವಾದ—ಹೇಳುತ್ತೇನೆ—ಕೇಳಿ! ನಗಾಡಬೇಡಿ—

**ಪದ—ಚಾಪುತಾಳ.**

**ಮಕ್ಕಳಿರಾ ಕಲಿತುಕೊಳ್ಳಿ । ಸುಮ್ಮನೆ ನಗಾಡಬೇಡಿ ।**
**ಕೆಟ್ಟುಹೋದೆ ನಾನು ಸುಳ್ಳಲ್ಲ । ಈ ಮದ್ಯದಿಂದ । ಕೆಟ್ಟುಹೋದೆ ನಾನು ಸುಳ್ಳಲ್ಲ ॥**
**ಎಮ್ ಎ ಎಮ್ ಎಲ್ ಆಗಿ ಇದ್ದೆ । ಡೇನ್ಯಲ್‌ನಂತೆ ಇರುತ್ತಿದ್ದೆ ।**
**ಯಾರು ನೋಡಿ । ನಾನೆ ಸುರೇಂದ್ರ ॥ ನಿಮ್ಮಾಣೆ ಹೌದು । ಯಾರು ನೋಡಿ**
**ನಾನೆ ಸುರೇಂದ್ರ ॥**

ಕೆಟ್ಟದ್ದೆಂದು ಗೊತ್ತು ಉಂಟು । ಜೀವವಾದರು ಬಿಡುತೇನೆ ।
ಹೆಂಡ ಮಾತ್ರ ಬಿಡಲಾರೆ ॥ ಕೆಟ್ಟು ಪೋದೆ । ಹೆಂಡಮಾತ್ರ ಬಿಡಲಾರೆ ॥
ಆಣೆಗೀಣೆ ಇಟ್ಟುಕೊಂಡೆ । ಮೇರೆದಪ್ಪಿ ಕುಡಿಯೆನೆಂದು ।
ಸಂಜೆಯಾಗಲು ಆಣೆ ಕಾಣೆ! ಸತ್ಯವಿದು । ಸಂಜೆಯಾಗಲು ಆಣೆ ಕಾಣೆ! ॥
ಹೇ । ಮಕ್ಕಳಿರ ಕಲಿತುಕೊಳ್ಳಿ . . . . . . . . . ॥

---

## ದೃಶ್ಯ ೨—ಬೀದಿ.

(ಕಾಫಿ ಹೋಟೆಲುಗಾರ ಶ್ಯಾಮನು ಕೋರ್ಟಿಗೆ ಹೋಗುತ್ತ ದಾರಿಯಲ್ಲಿ)

**ಪದ—ದಾದರ ತಾಳ.**

ಎಷ್ಟುದ್ದ ನಾಲಗೆ । ವಿನಾಯ್ಕನದುಃಹ- ॥
ಲೆಕ್ಚರ ಭರದಲಿ ಹೋಟೇಲ ದೂರಿದ ॥
ಎನಗಾದ ನಷ್ಟಕೆ—ಕೋರ್ಟಿಗೆ ಎಳೆದು—
ಬುದ್ಧಿಯು ಕಲಿಸುವೆ—ಚಂದದೆ ಅವಗೆ ॥ ೧ ॥

ಶ್ಯಾಮು:—ಆ ವಿನಾಯಕರಾಯನು ತಾನೊಬ್ಬ ಆರೋಗ್ಯವರ್ಧಕ ಸಭೆಯ ಮೆಂಬರ, ತನಗೆ ನಾಲಗೆ ಸ್ವಲ್ಪ ಉದ್ದ ಉಂಟು, ಎಂತ ನನ್ನ ಹೋಟೆಲಿನ ಬಳಿಯಲ್ಲಿ ನಿಂತು ದೊಡ್ಡ ಲೆಕ್ಚರ್ ಮಾಡಿ ಜನರಿಗೆಲ್ಲಾ ನನ್ನ ಹೊಟೆಲಿನಲ್ಲಿ ಅಸಹ್ಯ ಹುಟ್ಟುವಂತೆ ಮಾಡಿದ. ಈಗ ನನಗೆ ಮೊದಲಿನ ಅರ್ಧ ಗಿರಾಕಿಗಳೂ ಇಲ್ಲ! ಇರಲಿ, ಅವನನ್ನು ಸುಮ್ಮನೆ ಬಿಟ್ಟೇನೇ? ಕೋರ್ಟಿನಲ್ಲಿ 1000 ರೂಪಾಯಿಯ ನಷ್ಟಕ್ಕೆ ವ್ಯಾಜ್ಯ ದಾಕ್ಲು ಮಾಡಿದ್ದೇನೆ; ನಾಲ್ಕು ಜನ ವಕೀಲರುಗಳನ್ನು ಕಟ್ಟಿದ್ದೇನೆ! ನನ್ನದೆಂತೂ ಹೋಟೆಲಿನ ದುಡ್ಡು! ನೀರಿನಿಂದ ಬಂದದ್ದು; ನೀರಿನಂತೆ ಹೋಗಲಿ! ಆದರೆ ಅವನಿಗೊಂದು ಬುದ್ಧಿ ಕಲಿಸಿಯೇ ಬಿಡಬೇಕು! ಇಂದು ನಂಬರ ವಿಚಾರಣೆ. ವಕೀಲರು ಬೇಗನೆ ಬರಲಿಕ್ಕೆ ಹೇಳಿದ್ದಾರೆ (ಕಿಸೆಗೆ ಕೈಹಾಕಿ ನೋಡಿ) ಹೂಂ, ಮರೆತು ಹೋಗಲಿಲ್ಲ! ದುಡ್ಡಿನ ಚೀಲ ಬಿಟ್ಟು ಬಂದರೆ ಕೋರ್ಟಿನಲ್ಲಿ ಮಾತಾಡಿಸುವವರೇ ಇಲ್ಲ!

**ಪದ—ಆದಿತಾಳ.**

ಕೋರ್ಟಿನ ಬಳಿಯೊಳ್ । ಗಡಿಬಿಡಿ ಬಹಳ ।
ದುಡ್ಡಿನ ಚೀಲ—ಸಡಿಲಿಸದಿರೆ ಕೋಪಾಟೋಪ ॥
ಭಕ್ಷೀಸು—ತಾರ—ದಂಥ । ಶಕ್ತಿಯು—ಬೇಡ—ವೆಂತ ।
ಕೋರ್ಟಿನ ಕಂಭ—ನುಡಿವುದು ತುಂಬ । ಆದರಿಂ ಸುರಿವೇ ಕೈ ತುಂಬ ॥ ೧ ॥

## ದೃಶ್ಯ ೩.—ಮುನ್ಸಿಫ್ ಕೋರ್ಟು.

(ಮುನ್ಸಿಫರು —ವಕೀಲರು—ಗುಮಾಸ್ತೆಯರು—ಶ್ಯಾಮ—ವಿನಾಯಕರಾಯರೂ ಇತರ ಪ್ರೇಕ್ಷಕರೂ—ಕಕ್ಷಿಗಾರರೂ—ಇತ್ಯಾದಿ ಇರುವರು. ಗುಮಾಸ್ತೆಯಗು ಕೈಸನ್ನೆ ಬಾಯಿಸನ್ನೆ ಪಿಸುಪಿಸು ಮಾತುಗಳಿಂದ ಕಕ್ಷೀಗಾರರಿಂದ ದುಡ್ಡುಸೆಳೆಯಲು ಪ್ರಯತ್ನಿಸುವರು. ಪೇದೆಯರು ಆಗಾಗ 'ಸದ್ದು ಮಾಡಬೇಡಿ—ಯಾರದು ಗುಲ್ಲು ಮಾಡುವುದು' ಎಂದು ಹೇಳುತ್ತಿರುವರು. 'ಸದ್ದು! ಸದ್ದು' ಎಂದು ಕೈಯೆತ್ತಿ ಹೇಳುವರು. ದುಡ್ಡಿಗಾಗಿ ಮತ್ತೊಂದು ಕೈ ನೀಡುವರು—ಇತ್ಯಾದಿ ನಟನೆಗಳು ಈ ದೃಶ್ಯದಲ್ಲಿ ಹೊರಗಿಂದ ಹೊರಗೆ ನಡೆಯುತ್ತಿರಬೇಕು).

ಶ್ಯಾಮನ ಕಡೆಯ ಪ್ರಮುಖ ವಕೀಲ ಮಾಧವರಾವ್:—(ಮುನ್ಸಿಫರನ್ನು ಉದ್ದೇಶಿಸಿ) ಮಹಾಪ್ರಭೊ! ಈ ವ್ಯಾಜ್ಯವು ಈ ಪಟ್ಟಣದ ದೂಳೀ ಗಲ್ಲಿಯ ಭೀಮವಿಲಾಸವೆಂಬ ಕಾಫೀ ಹೋಟೆಲ್ ಪ್ರೊಪ್ರೈಟರ್ ಶ್ಯಾಮರಾಯರು ಆರೋಗ್ಯವರ್ಧಕಸಭೆಯ ಮೆಂಬರರೆಂದು ಹೇಳಿಕೊಳ್ಳುವ ವಿನಾಯಕರಾಯರಿಂದ ತನಗುಂಟಾದ ಸುಮಾರು 1000 ರೂಪಾಯಿಗಳ ನಷ್ಟಕ್ಕಾಗಿ ತಂದದ್ದಾಗಿರುತ್ತದೆ, ಮಹಾಸ್ವಾಮಿಾ! ಸದ್ರಿ ವಿನಾಯಕರಾಯರು ತಾ. 2-2-1929ರಲ್ಲಿ ವಾದಿಯ ಹೋಟೆಲಿನ ಸಮಿಾಪ ನಿಂತು ವಾದಿಗೆ ನಷ್ಟಮಾಡುವ ದುರುದ್ದೇಶದಿಂದ ಹೋಟೆಲಿಗೆ ಬರುವ ಜನರಲ್ಲಿ ಜುಗುಪ್ಸೆ ಹುಟ್ಟುವಂತೆ ಅಲ್ಲಸಲ್ಲದ ಸಂಗತಿಗಳನ್ನು ಸೇರಿಸಿ ತನ್ನ ಅಸಾಮಾನ್ಯ ವಾಕ್ಚಾತುರ್ಯದಿಂದ ಲೆಕ್ಚರ್ ಮಾಡಿದುದರಿಂದ ವಾದಿಗೆ ಬಹಳ ನಷ್ಟವಾಗಿದೆ. ಮಹಾಪ್ರಭೋ! ಪ್ರತಿವಾದಿಯ ಈ ಕೃತ್ಯವು ಕೇವಲ ದ್ವೇಷಸ್ವಭಾವದ್ದು, ಅಸಂಬದ್ಧವಾದ್ದು, ಆಧಾರವಿಲ್ಲದ್ದು, ಹಾನಿಕರವಾದ್ದು, ನ್ಯಾಯಕ್ಕೂ ನೀತಿಗೂ ವಿರುದ್ಧವಾದ್ದು ಎಂದೂ ಮನ್ನಿಸತಕ್ಕುದಲ್ಲ. ಈ ವಿಷಯವು P. W. 1, P. W. 2, P. W. 3, P. W. 4, up to P. W. 25. ಇವರ ಸಾಕ್ಷಿಗಳಿಂದಲೇ ವ್ಯಕ್ತವಾಗುತ್ತದೆ. ಅಲ್ಲದೆ I. L R. Case No. 25, No. 30, No. 728 ಇವುಗಳಿಂದಲೂ Madras Law Journal Case No. 58, No. 91, No. 576, No. 767 ಈ ಕೇಸುಗಳ ಇತ್ಯರ್ಥದ ಆಧಾರದಿಂದ ಸಹಾ ವಾದಿಯು ಕೇಳಿದ ನಿವೃತ್ತಿಯನ್ನು ಹೊಂದಲಿಕ್ಕೆ ಅರ್ಹನಾಗಿರುತ್ತಾನೆ, ಮಹಾ ಸ್ವಾಮಿಾ!

ಮುನ್ಸಿಪ್:—ವಿನಾಯಕರಾವ್, ಇದಕ್ಕೆ ನೀವೇನು ಹೇಳುತ್ತೀರಿ?

ವಿನಾಯಕ:—ನಾನು ಲೆಕ್ಚರ್ ಮಾಡಿದ್ದು ಹೌದು, ಮಹಾ ಸ್ವಾಮಿ! ಆದರೆ ವಾದಿಯು ಹೋಟೆಲಿಗೆ ಹೋಗಬಾರದೆಂದು ನಾನು ಯಾರನ್ನೂ ನಿರ್ಬಂಧಿಸಲಿಲ್ಲ. ವಾದಿಯನ್ನಾಗಲೀ ಆತನ ಹೋಟೆಲನ್ನಾಗಲೀ ಎತ್ತಿ ಮಾತಾಡಿದುದೂ ಇಲ್ಲ. ಕಾಫಿ ಕುಡಿಯುವ ಅಭ್ಯಾಸವೇ ಕೆಟ್ಟದೆಂದೂ ಅಭ್ಯಾಸವಿದ್ದು ಚೊಕ್ಕಟವಾಗಿ ಮನೆಯಲ್ಲೇ ಮಾಡಿಸಿಕೊಳ್ಳಲಿಕ್ಕೆ ಅನುಕೂಲವಿಲ್ಲದೆ ಹೋಟೆಲಿಗೇ ಹೋಗಬೇಕೆಂದಾದರೆ ಕಣ್ಣು ಚೆನ್ನಾಗಿ ತೆರೆದು ನೋಡಿ ಹೋಗಿರೆಂದೂ ನನ್ನ ಉಪನ್ಯಾಸದ ಸಾರಾಂಶವಾಗಿತ್ತು, ಮಹಾ ಪ್ರಭೊ!

ಮುನ್ಸಿಪ್:—ನೀವಾಗಲೀ ನಿಮ್ಮ ಆರೋಗ್ಯವರ್ಧಕ ಮಂಡಳಿಯ ಇತರ ಸದಸ್ಯರಾಗಲೀ ಇಂತಹ ಲೆಕ್ಚರ್ ಮಾಡುವ ಮೊದಲು ಹೋಟೆಲುಗಳಲ್ಲಿ ಕಂಡುಬರುವ ಕುಂದುಕೊರತೆಗಳನ್ನು ತಿದ್ದಿಕೊಳ್ಳಬೇಕೆಂದು ಹೋಟೆಲುಗಾರರಿಗೆ ಬೋಧಿಸಿರುವಿರೊ?

ವಿನಾಯಕ:—ಹೌದು ಸ್ವಾಮಿ, ನಾವು ಅನೇಕ ಹೋಟೆಲುಗಳನ್ನು ಸಂದರ್ಶಿಸಿ ಅಲ್ಲಿಯ ವಿದ್ಯಮಾನಗಳನ್ನು ಸೂಕ್ಷ್ಮವಾಗಿ ತಿಳಕೊಂಡು ಜನರ ಆರೋಗ್ಯದ ಕಡೆಗೆ ದೃಷ್ಟಿಯಿಟ್ಟು ವ್ಯಾಪಾರಮಾಡಬೇಕೆಂದು ಹೋಟೆಲಿನ ಮಾಲೀಕರಿಗೆಲ್ಲ ಪದೇ ಪದೇ ತಿಳಿಸಿದ್ದೆವು. ಅನಂತರ ಜನತಾಹಿತದೃಷ್ಟಿಯಿಂದ ಜನತೆಗೂ ಎಚ್ಚರಕೊಡುವುದಕ್ಕಾಗಿ ಲೆಕ್ಚರುಗಳನ್ನು ಕೊಟ್ಟೆವು. ಕಳದ ಫೆಬ್ರುವರಿಯಲ್ಲಾದ ಶಿಶುಸಪ್ತಾಹ ಕಾರ್ಯಕ್ರಮಕ್ಕನುಸರಿಸಿ ದೊಳಿಗಲ್ಲಿಯ ತೇರುಬೀದಿಯಲ್ಲಿ ನಾನು ಪ್ಲೇಂಟಿನಲ್ಲಿ ಕಾಣುವ ಲೆಕ್ಚರ್ ಮಾಡಿದ್ದು ಹೌದು—ಆದರೆ ವಾದಿಗೆ ನಷ್ಟವುಂಟು ಮಾಡುವ ಉದ್ದೇಶದಿಂದಲ್ಲ, ಮಹಾಸ್ವಾಮಿ!

ಮುನ್ಸಿಪ್:—ಇರಲಿ, ನೀವು ಅನೇಕ ಹೋಟೆಲುಗಳನ್ನು ಸಂದರ್ಶಿಸಿದಿರೆಂದು ಹೇಳಿದಿರಲ್ಲ! ಅವುಗಳಲ್ಲಿ ಏನೇನು ದೋಷಗಳನ್ನು ಕಂಡಿರಿ, ಹೇಳಿ ನೋಡೋಣ. ಈ ವ್ಯಾಜ್ಯದ ಇತ್ಯರ್ಥಕ್ಕೆ ಅವೆಲ್ಲ ಅವಶ್ಯವಿವೆ.

ವಿನಾಯಕ:—ಮಹಾಪ್ರಭೊ! ಲಾಲಿಸೋಣಾಗಲಿ; ನಾವು ಪಚೀತಿ

ಗಲ್ಲಿಯ ನಿರ್ಮಲವಿಲಾಸ ಎಂಬ ಕಾಫಿಕ್ಲಬ್‌ನ್ನು ಸಂದರ್ಶಿಸಿದೆವು. ಹೆಸರೇ "ನಿರ್ಮಲ" ವಿಲಾಸವೆಂದಿದ್ದ ಬಳಿಕ ಅಲ್ಲಿ ಎಲ್ಲವೂ ನಿರ್ಮಲ ವಾಗಿರಬೇಕೆಂದು ಯೋಚಿಸುತ್ತ ಒಳಗೆ ಹೋಗಿ ನೋಡಿದೆವು. ಆದರೆ ಆ ನಿರ್ಮಲತೆ ಮಾತ್ರ ಎಲ್ಲೋ ಅಡಗಿ ಕೂತಂತೆ ತೋರಿತು—ಹುಡುಕತೊಡಗಿ ದೆವು—ತಿಂಡಿ ಮಾಡುವ ಸ್ಥಳದಲ್ಲಿ, ಮಾಡುವವರ ಮೈ ಬಟ್ಟೆಬರೆಗಳಲ್ಲಿ, ಕಾಫಿ ನೀರು ಗಾಳಿಸುವ ಅರಿವೆಯಲ್ಲಿ, ತಿಂಡಿ ಸ್ಟೋರಿನಲ್ಲಿ, ಕೆಳಗಿನ ಚರಂಡಿಯಲ್ಲಿ—ತಿಂಡಿ ಪ್ಲೇಟುಗಳಲ್ಲಿ—ಅಲ್ಲಿ ಇಲ್ಲಿ ಎಂದಲ್ಲ; ಎಲ್ಲೆಲ್ಲಿ ನೋಡಿದರೂ ಆ ನಿರ್ಮಲತೆ ಮಾತ್ರ ಕಾಣೆ! ಹಾಗಾದರೆ ಆ ಸೈನ್ ಬೋರ್ಡಿನಲ್ಲಿ 'ನಿರ್ಮಲ ವಿಲಾಸ'ವೆಂದು ಬರೆದುದರ ಅರ್ಥವೇನೆಂದು ಯೋಚಿಸಿದಾಗ ನಮ್ಮಲ್ಲೊಬ್ಬ ರಸಿಕರು ವಿವರಿಸಿದರು.

ಮುನ್ಸಿಪ್:—ಏನೆಂದು?

ವಿನಾಯಕ:—ಸಂಸ್ಕೃತ ಶಬ್ದಗಳಲ್ಲಿ ಲ, ಳ, ಇವುಗಳಿಗೆ ಭೇಧವಿಲ್ಲ ವಂತೆ! 'ವಿಲಾಸ'ವನ್ನು 'ವಿಳಾಸ' ಎಂದೂ ಓದಬಹುದಂತೆ. 'ನಿರ್ಮಲ ವಿಳಾಸ!' ದಿನನಿತ್ಯವೂ ತಿಕ್ಕಲ್ಪಟ್ಟು ಮಿರುಗುತ್ತಿರುವ ಈ ಸೈನ್ ಬೋ ರ್ಡಿನ ನಮ್ಮ ವಿಳಾಸದಲ್ಲಿ ಮಾತ್ರ ನಿರ್ಮಲವಿವೆಯಲ್ಲದೆ ಮತ್ತೆಲ್ಲಿಯೂ ಇಲ್ಲ; ನಿರ್ಮಲತೆ ನೋಡಬೇಕಾದರೆ ಸ್ಯೈನ್ ಬೋರ್ಡು ನೋಡಿ, ಎಂದೇ ಅದರ ಅರ್ಥವಂತೆ!

ಮುನ್ಸಿಪ್:—ಬೇರೆ ಹೋಟೆಲುಗಳಲ್ಲಿ ಏನು ನೋಡಿದಿರಿ?

ವಿನಾಯಕ:—ಮಹಾಪ್ರಭೊ! ಯಾರಾದರೊಂದು ಕೆಲಸವನ್ನು ಬಹು ಕಷ್ಟಪಟ್ಟು ಮಾಡಿದರೆ ಆ ಕೆಲಸವನ್ನು ಕುರಿತು 'ಇದು ನನ್ನ ಮೈ ಬೆವರಿಂದಾದುದು. ಮೈ ಬೆವರು ಸುರಿಸಿ ಇದನ್ನು ಮಾಡಿದ್ದೇನೆ' ಎನ್ನು ವುದುಂಟು. ಆದರೆ ಅಂತಹ ಮಾತುಗಳು ಅಕ್ಷರಶಃ (literally) ನಿಜ ವಾಗುವುದನ್ನು ಪ್ರತ್ಯಕ್ಷ ನೋಡಬೇಕೆಂದಿದ್ದವರು ಕಾಫಿ ಹೋಟೆಲಿನಲ್ಲಿ ತಿಂಡಿ ಮಾಡುವ ಸ್ಥಳಕ್ಕೆ ಹೋಗಿ ನೋಡಬೇಕು. ಇನ್ನು ಆ ತಿಂಡಿಯ ಸ್ಟೋರ್—ಅದಿರುವುದು ಬೀದಿಯ ದೂಳಿಗೆ ಮೈಗೊಟ್ಟು ಚರಂಡಿಯ ಮೇಲ್ಗಡೆಯಲ್ಲಿ. ಆ ಚರಂಡಿಯಾದರೂ ಸಾಮಾನ್ಯವಾದುದೆ? ಆ ಬೀದಿಯ

ಹಟ್ಟಿಕೊಟ್ಟಿಗೆ ಬಚ್ಚಲುಗಳ ತೀರ್ಥವನ್ನು ಸೇಕರಿಸಿ ಕಾದಿಟ್ಟುಕೊಂಡಿರುವ ಪುಣ್ಯ ಪುಷ್ಕರಣಿ ಎಂದರೆ ಅದೇ ತಾನೆ ಅದರಲ್ಲಿ ಬರೀ ಕಣ್ಣಿಗೂ ಕಾಲು ಇಂಚಿನಿಂದ ನಾಲ್ಕು ಇಂಚಿನ ವರೆಗೂ ಉದ್ದದ ತರಾಂತರ ಕ್ರಿಮಿ ಕೀಟಗಳು ಸದಾ ನರ್ತನಮಾಡುತ್ತಿದ್ದುವು. ನೊಣಗಳು ಈ ಪುಣ್ಯ ತೀರ್ಥದಲ್ಲಿ ಸ್ನಾನಮಾಡಿ ಗಂಧವನ್ನು ಲೇಪಿಸಿಕೊಂಡು ತಿಂಡಿಗಳ ಮೇಲೆ ಕುಳಿತು ಮೈಯೊರಸಿಕೊಂಡು ಪುನಃ ಸ್ನಾನಕ್ಕೆ ತೆರಳುತ್ತಲೇ ಇದ್ದುವು. ಎದುರಿನಲ್ಲಿ ಧೂಳಿಮಯ ಬೀದಿ! ಬೆಳಗ್ಗೆ ಪ್ಲೇಟಿನಲ್ಲಿ 2 ಇಂಚು ದಪ್ಪಕ್ಕೆ ಹಲವಾ ಹರಡಿಸಿಟ್ಟರೆ ಮಧ್ಯಾಹ್ನದ ಒಳಗೆ 2½ ಇಂಚಿಗೆ ಕಡಿಮೆಯಾಗದೆ ದಪ್ಪ ಬೆಳೆದು ಬಿಡುವುದು! ಆ ಮೇಲೆ ಅಲ್ಲಿಯ ಎನೆಮೆಲ್ ಕಪ್ಪು ಸೋಸರುಗಳನ್ನು ನೋಡುವಾಗ ಆ ಪ್ರತಾಪಿ ಸಂಗ್ರಾಮಸಿಂಗನ ನೆನಪು ಹಠಾತ್ತಾಗಿ ಆಯಿತು. ಅವನ ಮೈಮೇಲೆ 80 ಗಾಯಗಳಿದ್ದುವಂತೆ. ಇವುಗಳಲ್ಲಿ ಪ್ರತಿಯೊಂದಕ್ಕೂ ಮತ್ತೂ 26 ಹೆಚ್ಚು! ಈ ಗಾಯಗಳಿಗೊಂದು ಲೇಪ; ಅಮೃತಾಂಜನವಲ್ಲ, ಓರಿಯಂಟಲ್ ಬಾಮೂ ಅಲ್ಲ, ಜಾಂಬಕ್ಕೂ ಅಲ್ಲ—ಅದೇ ಅರ್ಧ ಡಬ್ಬಿ ನೀರಿನಲ್ಲಿ ನಾಲ್ಕಾರು ದಿವಸಗಳ ಪರಿಯಂತರವೂ ನೂರಾರು ಕಪ್ಪು ಪ್ಲೇಟು ಸೋಸರುಗಳು ದಿನವಹಿ ನೂರಾರು ಸಲ ಕಾಗೆ ಮಿಂದಂತೆ ಮಿಂದ-ದರಿಂದುಂಟಾದ ಅದೊಂದು ದಿವ್ಯ ಲೇಪ! ಕೆಲವು ವೇಳೆ ಕಪ್ ಸೋಸರುಗಳು ಕಪ್ಪೆಯಂತೆ ಕೈಯಿಂದ ಜಾರಿ ಹೋಗುವುದೂ ಈ ಲೇಪದ ಮಹಾತ್ಮೆಯಿಂದಲೇ. ಆ ನೆಲವೋ! ಬೆಂಚು ಕುರ್ಚಿಗಳೋ! ಅವುಗಳಿಗೂ ಕಸಬರಿಕೆಗೂ ಕಡಿಮೆಯೆಂದರೆ ಆರೇಳು ತಿಂಗಳುಗಳಿಂದ ಬದ್ಧ ದ್ವೇಷವಿದ್ದಿರಬೇಕೆಂದು ಕಣ್ಣಿದ್ದವರು ಹೇಳುತ್ತಿದ್ದರು. ಒಳಗಿನಿಂದ ಹೊಗೆಯ ದೂಪ ಹೊರಗಿನಿಂದೊಳಗೆ ಧೂಳೀ ದೂಪ! ಇವುಗಳಿಂದ ಅತಿಥಿ ಪೂಜೆ! ಈ ಅತಿಥಿಗಳೂ ಆಲಸ್ಯದ ಮುದ್ದೆಗಳೆಂದೇ ತೋರುತ್ತಿದ್ದರು. ಇವರು ಸೇವಿಸಿದ ಚುಟ್ಟಾ ಬೀಡಿ ಬೀಡಾ ಮುಂತಾದುವುಗಳ ಚೂರುಗಳೂ ಅಲ್ಲೇ ನೆಲವನ್ನಲಂಕರಿಸಿದ್ದುವು. ಅಷ್ಟು ಮಾತ್ರವೆ? ವೀಳ್ಯದೆಲೆ ಸೇವನೆಯಾದ ಮೇಲೆಯೂ ತಿಂಡಿಯಲ್ಲಿ ಸಹಜವಾಗಿ ಬರುವ ಕಸಕಡ್ಡಿ ಕಲ್ಲುಗಳು ಬಾಯಿಗೆ ಬಂದಾಗಲೂ ಉಗುಳಲಿಕ್ಕೆ ಕೂತಲ್ಲಿಂದ ಏಳಲು ಮನಸ್ಸಾಗದೆ ಅಲ್ಲೇ ತಲೆಬಗ್ಗಿಸಿ ಬೆಂಚಿನ ಅಡಿಗೆ ಉಗುಳಿದುದೂ ಕಾಣಬರು

ತ್ತಿತ್ತು! ಹೀಗೆಯೇ ಆನಂದ ವಿಲಾಸ, ಕೋಮಲ ವಿಲಾಸ, ಶುಚಿರುಚಿ, ತೃಶಾಶಾಂತಿ ಗೃಹ ಇತ್ಯಾದಿ ಇತ್ಯಾದಿ ಆಕರ್ಶಣೀಯವಾದ ಹೆಸರಿನ ನರಕಕುಂಡಗಳೆಲ್ಲ ಒಂದೇ ಅಚ್ಚಿನಿಂದ ಮಾಡಿದ ಚಿತ್ರಗಳಂತೆ ಇದ್ದುವು. ಹೆಸರು ಉತ್ತರ ಧ್ರುವದಲ್ಲಿ! ವಿದ್ಯಮಾನಗಳು ದಕ್ಷಿಣ ಧ್ರುವದಲ್ಲಿ! ಒಂದು ಕಡೆ ಮಾತ್ರ ಹೆಸರಿಗೂ ವಿದ್ಯಮಾನಕ್ಕೂ ಸರಿಯಿತ್ತು, ಮಹಾಪ್ರಭೊ'

ಮುನ್ಸಿಪ್:—ಹಾಗಾದರೆ ಯೋಗ್ಯವಾದ ಹೋಟೆಲ್ ಒಂದಾದರೂ ಇದೆಯೆಂದಾಯಿತು—ಅದರ ಹೆಸರೇನು? .

ಶ್ಯಾಮು ವಕೀಲ:—ಅದೇ ನಮ್ಮ ವಾದಿಯ ಭೀಮವಿಲಾಸ! ಯಾರಾದರೂ ಅದನ್ನು ಕ್ರಮವಾಗಿ ಸಂದರ್ಶಿಸುತ್ತ ಬಂದರೆ ಭೀಮಸಂತಾಗುವರೆಂಬುದು ವಾದಿಯ ನಿಸ್ಸಂದೇಹವಾದ ನಂಬಿಕೆ, ಮಹಾಪ್ರಭೊ!

ವಿನಾಯಕ:—(ಸ್ವಗತ) ಓಜಿಯಸ್‌ನ ಕುದುರೆ ಲಾಯದ ಹೊಲಸನ್ನು ತೆಗೆಯಲಿಕ್ಕೆ ಹೆರ್ಕುಲಿಯುಸ್‌ನೇ ಬರಬೇಕಾಯಿತಂತೆ! ಅಂತೆಯೇ ಈ ಭೀಮವಿಲಾಸ ಆಂಜನೇಯ ವಿಲಾಸ ಇವುಗಳ ಕೊಳಕನ್ನು ತೆಗೆಯಲಿಕ್ಕೆ ಭೀಮಾಂಜನೇಯರೇ ಬರಬೇಕು ಎಂದರಾದರೂ ಅರ್ಥ ಸರಿಯಾದೀತು! (ಪ್ರಕಾಶವಾಗಿ) ಅಲ್ಲ, ಮಹಾಸ್ವಾಮಿಾ, ಅದಲ್ಲ; ಅದರ ಹೆಸರು "ಲಕ್ಷ್ಮೀ ವಿಲಾಸ" ಅದರ ಪ್ರೊಪ್ರ್ಯಾಟರನ ಪೆಟ್ಟಿಗೆಯಲ್ಲಿ ಲಕ್ಷ್ಮೀವಿಲಾಸವು ತೋರಿ ಬರುತ್ತಿತ್ತು.

ಮುನ್ಸಿಪ್:—ಹಾಗೋ, ಎಲ್ಲವೂ ಒಂದೇ; ಜನರ ಆರೋಗ್ಯವನ್ನು ಕೆಡಿಸಿ ದುಡ್ಡು ಸುಲಿಯುವ ಸಂಸ್ಥೆಗಳೇ ಎಲ್ಲ!

ವಿನಾಯಕ:—ಮಹಾಪ್ರಭೊ! ಲಾಲಿಸೋಣಾಗಲಿ—ನೊಣ, ನುಶಿ, ದೂಳು, ಉಗುಳು, ಅಜೀರ್ಣಕರವಾದ ತಿಂಡಿ, ಕೊಳಕುತನ, ಇವೇ ಸರ್ವ ರೋಗಗಳಿಗೂ ಮೂಲವಾಗಿರುತ್ತ ಇವುಗಳಿಗೆ ಮಾತೃಸ್ಥಾನದಂತಿರುವ ಸುಮಾರು 300 ಹೋಟೆಲುಗಳು ಈ ಸಣ್ಣ ಪೇಟೆಯಲ್ಲಿದ್ದರೂ ಅವುಗಳ ಸುವ್ಯವಸ್ಥೆಯ ಕಡೆಗೆ ನಾವು ದೃಷ್ಟಿಯಿಡದೆ ಪಟ್ಟಣದ ಬಹು ದೂರದ ನಾಲ್ಕು ಮೂಲೆಗಳಲ್ಲಿ—ಅದೂ ಬೀದಿಗಳನ್ನು ಬಿಟ್ಟು ದೂರದಲ್ಲಿ—ಇರುವ

ನಾಲ್ಕು ಹೆಂಡದಂಗಡಿಗಳಿಂದುಂಟಾಗುವ ಆರೋಗ್ಯ ಹಾನಿ ಧನ ಹಾನಿಗಳನ್ನು ಕುರಿತು ನಾವು ಬೊಬ್ಬೆಯಿಡುತ್ತೇವೆ. ಅವುಗಳಷ್ಟೇ ಧನ ನಾಶ ಆರೋಗ್ಯ ನಾಶಕಾರಕಗಳಾದ ಕಾಫಿ ಹೋಟೆಲುಗಳು ಮಾರಿಗೊಂದರಂತಿದ್ದರೂ ನಾವು ಕಣ್ಣು ಮುಚ್ಚಿಕೊಂಡಿರುವೆವು ಅದುಕಾರಣ ಅವುಗಳನ್ನು ಸಂದರ್ಶಿಸುವರು ಚೆನ್ನಾಗಿ ಕಣ್ತೆರೆದು ನೋಡಿಕೊಂಡು ಹೋಗಿ ಎಂದು ನಾನು ಹೇಳಿದುದು ಉಂಟು, ಮಹಾಸ್ವಾಮಿ! ವಾದಿಯ ಕ್ಲಬ್ ಆರೋಗ್ಯನಿಯಮಕ್ಕೆ ಆದರ್ಶಪ್ರಾಯವಾಗಿದ್ದರೆ ನನ್ನ ಉಪನ್ಯಾಸದಿಂದ ಆತನಿಗೆ ಲಾಭವಾಗಬೇಕಿತ್ತೇ ಹೊರತು ಎಂದೂ ನಷ್ಟವಾಗುತ್ತಿದ್ದಿಲ್ಲ. ಈಗ ಆತನು ನನ್ನ ಮೇಲೆ ರೇಗಿಬಿದ್ದುದನ್ನು ಯೋಚಿಸಿದರೆ ನಾನು ನನ್ನ ಉಪನ್ಯಾಸದಲ್ಲಿ ತೋರಿಸಿಕೊಟ್ಟ ಕುಂದುಕೊರತೆಗಳಿಗೆಲ್ಲ ಆತನ ಹೊಟೇಲು ಆಶ್ರಯಸ್ಥಾನವಾಗಿರಬೇಕು.

ಶ್ಯಾಮು ವಕೀಲ:—ಹಾಗೆಂದೂ ಇಲ್ಲ, ಮಹಾಸ್ವಾಮಿ, ತನ್ನ ಕ್ಲಬ್ ನಿರ್ಮಲತೆಯಲ್ಲಿ ಕೊನೆಯ ಮಾತು (Last word in cleanliness) ಎಂದೂ ಪ್ರತಿವಾದಿಯು ಅಲ್ಲಸಲ್ಲದ ಸಂಗತಿಗಳನ್ನು ಆರೋಪಿಸಿ ತನಗೆ ನಷ್ಟಪಡಿಸಿರುವನೆಂದೂ ವಾದಿಯು ವಾಕ್ಪ್ರಮಾಣ ಮಾಡಿ ಅಫೀದಾವೀತು ಕೊಟ್ಟಿದ್ದಾನೆ, ಮಹಾಪ್ರಭೊ! ಅಲ್ಲದೆ 25 ಜನ ಸಾಕ್ಷಿಗಾರರು ಸತ್ಯರಕ್ಷಣೆಗಾಗಿ ಬಂದಿರುತ್ತಾರೆ.

ಮುನ್ಸಿಫ್:—ವಿನಾಯಕರಾವ್, ನಿನ್ನ ಕಡೆಯ ವಕೀಲರೂ ಇಲ್ಲ. ಸಾಕ್ಷಿಗಳೂ ಇಲ್ಲವೆ?

ವಿನಾಯಕ:—ಮಹಾಪ್ರಭೊ! ಧರ್ಮಾವತಾರರು ತಾವಾಗಿರುವಿರಿ, ಸನ್ನಿಧಾನಕ್ಕೆ ಸತ್ಯಾಂಶವನ್ನು ತಿಳಕೊಳ್ಳುವುದು ಕಷ್ಟವಲ್ಲ. ಕಾಫಿ ಕುಡಿಸಿದರೆ ಎಷ್ಟೋ ಸಾಕ್ಷಿಗಳು ಸಿಕ್ಕಿಯಾವು. ಸಾಕ್ಷಿಗಳನ್ನು ದುಡ್ಡುಕೊಟ್ಟು ಕೊಂಡುಕೊಳ್ಳಬಹುದು. ಮಹಾಪ್ರಭೊ, ಬಡವನ ಮೇಲೆ ದಯೆಯಿಟ್ಟು ಇಲ್ಲೇ ಆಚೆ ಬೀದಿಯಲ್ಲಿರುವ ಆ ಭೀಮವಿಲಾಸವನ್ನು ಸ್ವತಹ ಸಂದರ್ಶಿಸೋಣಾಗಲಿ. ಆಗ ವಾದಿಯ ಹೋಟೆಲಿನ ನಿರ್ಮಲತೆಯೂ ಅಫಿದಾವೀತಿನ ಯಥಾರ್ತತೆಯೂ ಎಲ್ಲವೂ ಗೊತ್ತಾಗುವುದು ಮಹಾಪ್ರಭೊ, ಅಷ್ಟೊಂದು ಅನುಗ್ರಹಿಸೋಣಾಗಲಿ!

ಮುನ್ಸಿಪ್:—ಅದಕ್ಕೇನು ಅಡ್ಡಿ! ಈಗೆಂತೂ ಸಾಯಂಕಾಲವಾಯಿತು; ಇನ್ನು ವಿಚಾರಣೆಗಳಿಲ್ಲ ನಾಳೆ. Mr. ಮಾಧವರಾವ್, ಈಗ ನೆಟ್ಟಗೆ ನಿಮ್ಮ ವಾದಿಯ ಆ ಭೀಮವಿಲಾಸವನ್ನು ಸಂದರ್ಶಿಸೋಣ.

ಮಾಧವರಾವ್:—ಮಹಾಪ್ರಭೊ, ತಾವು ಅಷ್ಟೊಂದು ಶ್ರಮ ಪಡಬೇಕಾಗಿಲ್ಲ; ಕಮಿಶನ್ ಫೀಸು ಕಟ್ಟಲಿಕ್ಕೆ ವಾದಿಯು ಸಿದ್ಧನಿದ್ದಾನೆ!

ಮುನ್ಸಿಪ್:—ಶ್ರಮವೇನು? ಈಗೆಂತೂ walking ಗೆ ಹೋಗುವ ಸಮಯ. ಆ ಮಾರ್ಗವಾಗಿ ಹೋದರಾಯಿತು. ಹೋಗುತ್ತ ದಾರಿಯಲ್ಲಿ ಆಸ್ಪತ್ರಿಯಿಂದ ಡಾಕ್ಟರರನ್ನೂ ಕರೆದುಕೊಂಡು ಹೋಗೋಣ, ದಫೆದಾರ್-ಮೋಟರ್‌ಕಾರ್ ತರಿಸು! (ಎಲ್ಲರೂ ಏಳುವರು. ಮುನ್ಸಿಪರು ಎದ್ದುಹೋಗುವರು. ಕೋರ್ಟಿನಲ್ಲಿ ಗುಮಾಸ್ತೆಯರು ಕಕ್ಷಿಗಾರರು ವಕೀಲರು ಪೇದೆಗಳು ಇವರೊಳಗೆ ಫೀಸು ರುಸುಂ ಭಕ್ಷಿಸುಗಳ ಬಗ್ಗೆ ಗಜಬಜವಾಗುವುದು.)

ಮಾಧವರಾಯರ ಗುಮಾಸ್ತ:—ಶ್ಯಾಮರಾಯರೆ, ಎಲ್ಲಿ ನಿಮ್ಮ ಜನಗಳು? ಹೋಟೆಲಿಗೆ ಓಡಿಸಿ; ಬೇಗಬೇಗನೆ ಎಲ್ಲವನ್ನೂ ನಿರ್ಮಲಗೊಳಿಸಿರಿ; ಇಲ್ಲವಾದರೆ ಸುಳ್ಳು ಅಫೀದಾವೀತು ಕೊಟ್ಟದ್ದಕ್ಕೆ ನಿಮಗೆ ಶಿಕ್ಷೆಯಾದೀತು' ವ್ಯಾಜ್ಯವೆಂತೂ ನಿಮಗೆ ಸೋಲೇ, ಮತ್ತೇನು!

ಶ್ಯಾಮ:—ಸರಿ, ಇಷ್ಟು ತಿಂಗಳುಗಳಿಂದ ನಿಮ್ಮ ಕೋರ್ಟು ಕೋರ್ಟಿಗೇ ಧರ್ಮಾರ್ಥ ಕಾಫಿ ತಿಂಡಿ ಕೊಟ್ಟುದಕ್ಕೆ ಇಷ್ಟಾದರೂ ಹೇಳಿದಿರಲ್ಲವೆ? ಸಾಕು! ಹೀಗೆಲ್ಲಾ ಬಂದೀತೆಂದು ನೀವು ಮೊದಲಾಗಿ ಸೂಚನೆ ಕೊಡದೆ ಈಗ "ಎಲ್ಲಾ ನಿರ್ಮಲ ಮಾಡಿರಿ!" ಅದು ಕಾಫಿ ಕುಡಿದಂತೆ ಅಲ್ಲ! ಎಲ್ಲರೂ ಒಟ್ಟಿಗೆ ನನ್ನನ್ನು ಕೊಂದಿರಿ! ಸೇಸೋ, ಕಿಟ್ಟೋ, ರಾಮೂ, ಎಲ್ಲಿ ಸತ್ತಿದ್ದೀರಿ! ಸ್ಕ್ಯಾಕಲ್‌ಗಳು ಎಲ್ಲಿ? ಓಡಿಸಿರಿ, ಓಡಿಸಿರಿ, ಎಲ್ಲಾ ನಿರ್ಮಲ ಮಾಡುವಂತೆ ಹೇಳಿರೊ!

ರಾಮು:—ಅವರೆಲ್ಲಾ ಇಷ್ಟರ ವರೇಗೆ ಇಲ್ಲಿ ಕಾದು ಬಿದ್ದು ಬಿದ್ದು ಬೇಸರ ಹಿಡಿದು ಈಗ ತಾನೇ ಒಂದು round ರ್‍ಯೊಂಡ್ ಹೊಡೆದು ಬರುತ್ತೇವೆಂತ ಸ್ಕ್ಯಾಕಲ್ ಹತ್ತಿ ಹೋದರು—ಈಗ ಬಂದಾರು!

ಶ್ಯಾಮು:—ಬರಲಿ, ಸಾಯಲಿ, ನಿಮ್ಮ ರೌಂಡು ನನ್ನ ಕುತ್ತಿಗೆಗೆ ಪಾಶಿ!

ಪದ—ರೂಪಕ ತಾಳ.

ಅಹ, ಕೋರ್ಟಿಗೆ ನಾ ಹತ್ತಿದೆನು—ಕೆಟ್ಟೆನು!
ಸಾಲಗೀಲ ಮಾಡಿ ನಾನು ದುಡ್ಡು ವೆಚ್ಚಗೈದೆನು ।
ಕೆಲಸಗಿಲಸ ಬಿಟ್ಟು ಕೋರ್ಟು ಜಗಲಿಯನ್ನು ಕಾದೆನು ।
ಕಳೆವುದು—ತೊಳೆವುದು—ಹೇಗೆಹಾ! ನಾನೀ—
ವ್ಯಾಜ್ಯಕ್ಕೆ ಮಾಡಿದ ಸಾಲವ ॥ ೧

(ಪರದೆಯು ಬೀಳುವುದು)

---

## ದೃಶ್ಯ ೪.—ಭೀಮವಿಲಾಸ ಕಾಫಿ ಕ್ಲಬ್.

(ಹಿಂದಿನ ವರ್ಣನೆಗೆ ತಕ್ಕಂತೆ ದೃಶ್ಯಗಳನ್ನು ಸಿದ್ಧಗೊಳಿಸತಕ್ಕದು—ಚರಂಡಿಯ ಬಳಿಯಲ್ಲಿ ಬಾಗಲಿಲ್ಲದ ಮುರುಕು ತಿಂಡಿ ಕವಾಟು, ಹೋಟೆಲಿನ ಬಾಗಲಲ್ಲಿಯೇ ಕೊಳಕಾದ ಹುಡುಗನು ಪ್ಲೇಟುಗಳನ್ನು ತೊಳೆಯುವನು. ಹೊಲಸು ನೀರನ್ನು ಚೆಲ್ಲುತ್ತಿರುವನು. ತಿಂಡಿಯ ಕವಾಟಿನ ಬಳಿಯಲ್ಲಿ ಹೊಗೆಸೊಪ್ಪು ಜಗಿಯುತ್ತ ತಕ್ಕಡಿ ಹಿಡಿದು ಒಬ್ಬನು ಕೂತಿರುವನು. ಗುಪ್ತಭಾಗಗಳನ್ನು ತುರಿಸುತ್ತಿರುವನು. ಆಗಾಗ ಕೆಮ್ಮುತ್ತಲಿರುವನು. ಒಳಗೆ ಅಲ್ಲಲ್ಲಿ ಜನರು ಕೂತುಕೊಂಡು ಕಾಫಿ ಕುಡಿಯುತ್ತಿರುವರು. ಉಗುಳುತ್ತಿರುವುದು ಇತ್ಯಾದಿ ಇತ್ಯಾದಿ)

ಒಬ್ಬ ಗಿರಾಕಿ:—(ತಿಂಡಿಯ ಕವಾಟಿನ ಬಳಿಗೆ ಬರುವನು)

ಅಲ್ಲಿದ್ದವನು:—ನಿಮಗೇನು ತಿಂಡಿ ಕೊಡಲಿ ಸ್ವಾಮಿ, ರುಲಾ, ದೋಸೆ, ಚಟ್ನಿ ಅಂಬೊಡೆ, ಖಾರಬುಂದಿ, ವಾಂಗೀಪಾತು! ಹಲವಾ, (ಇತ್ಯಾದಿ ಹೆಸರುಗಳನ್ನು ಹೇಳುವನು. ಮತ್ತೊಂದು ಬದಿಯಲ್ಲಿ ಕೊಳಕು ಅರಿವೆಯಿಂದ ಕಾಫಿ ನೀರು ಹಿಂಡುತ್ತ, ಮುಖದ ಬೆವರನ್ನು ಬೆರಳಿಂದ ಕೆರೆದು ಸಿಡಿಯುತ್ತಲಿರುವವನನ್ನು ನೋಡಿ) ಮಂಜಣ್ಣಾ—ಇವರಿಗೆ ಸಿಂಗಲ್ ಚಾ, ಅಲ್ಲವೆ? ಸ್ವಾಮಿ. ತಿನ್ನಲಿಕ್ಕೇನು ಕೊಡಲಿ?

ಗಿರಾಕಿ:—ಏನಾದರೂ ಒಂದಾಣೆದ್ದು ಕೊಡಿ.

ಅಲ್ಲಿದ್ದವ:—ಆಗಲಿ, ಸ್ವಾಮಿ, ಹೋಗಿ ಕೂತುಕೊಳ್ಳಿ—ಈಗಲೇ ಕಳುಹಿಸಿಕೊಡುವೆನು. (ಸ್ವಗತ) ಹೀಗೆಯೇ ಎಲ್ಲರೂ ಹೇಳಿದರೆ ಬಹಳ

ಬಳ್ಳೇದು. ಕಚಾರ್ಗದೆ ಇನ್ನೂ ಉಳಿದಿರುವ—ಹಳಸಿಹೋಗಿರುವ—ಮೊನ್ನೆ ಆಚೆ ಮೊನ್ನೆಮಾಡಿರುವ--ತಿಂಡಿಗಳನ್ನೆಲ್ಲಾ (Grand clearance sale) ಗ್ರ್ಯಾಂಡ್ ಕ್ಲೀಯರೆನ್ಸ್ ಸೇಲ್ ಮಾಡಲಿಕ್ಕೆ ನಮಗೆ ಬಹಳ ಅನುಕೂಲ—(ಎನ್ನುತ್ತ ಪ್ಲೇಟೊಂದನ್ನು ತೆಗೆದು ಅದರಲ್ಲಿ ಕೆಲವು ತಿಂಡಿಗಳನ್ನು ಹಾಕಿ) ವೆಂಕಟ್ಟಾ! ಎಲ್ಲಿ ಸತ್ತಿದ್ದಿಯೋ, ಬೇಗ ಬಾ, (ವೆಂಕಟ್ಟ ಸೊಂಟಕ್ಕೆ ಮಾತ್ರ ಕೊಳಕು ವಸ್ತ್ರದ ಚೂರೊಂದನ್ನು ಸುತ್ತಿಕೊಂಡು ಬೀಡಿ ಎಳೆಯುತ್ತ ಮೈತುರಿಸಿಕೊಳ್ಳುತ್ತ ಬಂದು ಪ್ಲೇಟನ್ನು ತೆಕ್ಕೊಳ್ಳುವನು) ಆ ರಾಯರಿಗೆ ಕೊಂಡುಹೋಗಿ ಕೊಡು; ನಮ್ಮ ರಾಯರು, ಎಷ್ಟು ಹೊತ್ತಿನಿಂದ ಕಾಯುತ್ತಾ ಇದ್ದಾರೆ! ಬೇಗ.

ಮುನ್ಸಿಪರು, ವಕೀಲರು, ಡಾಕ್ಟರರು ಪ್ರವೇಶಿಸುವರು. ಹಿಂದಿನಿಂದಲೇ ಶ್ಯಾಮು, ಸೇಸು, ಕಿಟ್ಟು, ರಾಮು ಮುಂತಾದವರು ಓಡಿ ಓಡಿ ದೀರ್ಘ ಶ್ವಾಸ ಬಿಡುತ್ತ ಬರುವರು. ಶ್ಯಾಮು ತಲೆಬಡಕೊಳ್ಳುವನು. ಬೇರೆಯವರು ಪಿಳಿ ಪಿಳಿ ನೋಡುವರು.)

ಮುನ್ಸಿಪ್:—(ಹೋಟೆಲಿನ ಬಾಗಲಿನ ಬಳಿ ನೋಡಿ ಸ್ವಗತ) ಇದು ಹೋಟೆಲಿನ ಬಾಗಲೋ ನರಕದ ಬಾಗಲೊ! (ಒಳಗೆ ಹೋಗಿ ಅಲ್ಲಲ್ಲಿ ನೋಡುತ್ತ) Most horrible! a den of rubbish & filth! oh, awful stench! suffocated with smoke & dust! (ಎಂದು ಡಾಕ್ಟರರ ಹತ್ತಿರ ಹೇಳುವರು) ಡಾಕ್ಟರರೆ, ನಿಮ್ಮ ಅಭಿಪ್ರಾಯವೇನು? Do you like to have any refreshment here?

ಡಾಕ್ಟರ್:- Refreshment! in this hell of hells! God forbid! neither for love nor for money! ಒಂದು ಸಾವಿರ ರೂಪಾಯಿಯ ಗಂಟನ್ನು ನನ್ನ ಮುಂದಿಟ್ಟರೂ, ಅಷ್ಟೇಕೆ, ಈಗಲೇ ನನ್ನ ಪ್ರಾಣ ಹಾರಿಹೋಗುವಂತಾದರೂ ಈ ಹೊಲಸಿನ ತಿಪ್ಪೆಯ ಯಾವುದೊಂದನ್ನೂ ನನ್ನ ಬಾಯಿಯ ಬಳಿಗೆ ಬರಗೊಡಿಸೆನು.

ವಿನಾಯಕ:—(ತಿಂಡಿಯ ಕವಾಟಿನ ಎಡೆಯನ್ನು ತೋರಿಸಿ) ಇಲ್ಲಿ ನೋಡೋಣಾಗಲಿ, ಮಹಾಸ್ವಾಮಿ, ಎಕ್ಕಳೆಗಳು! (ಅಲ್ಲೇ ಒಂದು ತಿಂಡಿಯ ರಾಶಿಯನ್ನು ತೋರಿಸಿ) ಇಲ್ಲಿ ಅವುಗಳ ಪಿಷ್ಟೆ! ಈ ಹಲವಾದ ಮೇಲೆ ಗುಬ್ಬಚ್ಚಿಯ ಹಿಕ್ಕೆ! ಈ ತಿಂಡಿಯಲ್ಲಿ ಅಂಟಿಹೋಗಿದ್ದ ನೊಣಗಳೆಷ್ಟು! ಈ ಶರಬತ್ತು ಬಾಟ್ಲಿಯಲ್ಲಿ ಸತ್ತು ತೇಲುತ್ತಿರುವ ಇರುವೆಗಳು! ಇದು ತಟ್ಟೆ ತೊಳೆ

ಯುವ ಬಾಲ್ದಿ! ಇದರ ನೀರು ನಾರುತ್ತದೆ! ಸ್ವಾಮಿ, ಇತ್ತ ದಯಮಾಡೋಣಾಗಲಿ, spittings (ಉಗುಳು!) ಇದು ಕಾಪಿ ನೀರು ಗಾಳಿಸುವ ದಿವ್ಯ ವಸ್ತ್ರ! ಇನ್ನು ಈ ಹೋಟೆಲ್ ಸಿಬಂದಿ! ನಿರ್ಮಲತೆಗೆ ಮೆಡಲ್ ಕೊಡಬೇಕು ಇಂಥವರಿಗಲ್ಲವೆ! (ಎಂದು ಮುಂತಾಗಿ ಅನೇಕ ಅಸಹ್ಯ ದೃಶ್ಯಗಳನ್ನು ತೋರಿಸುವನು).

ಡಾಕ್ಟರ್:—No, no, enough of it (ಮುನ್ಸಿಪರ ಕಡೆಗೆ ತಿರುಗಿ) That man over there—caughing over every thing is really consumptive; that with blisters in his lips and fingers is a dangerous leper; this plate bearer scratching his itches is full of venerial diseases. This in my opinion is the nursery for all sorts of disease germs.

ಮುನ್ಸಿಪ್:—ಸಾಕು! ಇನ್ನೂ ಇಲ್ಲಿ ನಿಲ್ಲಲು ಸಾಧ್ಯವಿಲ್ಲ. The sooner we quit this place the better for us. I can't bear this scene any longer. ಈ hotelಗಳನ್ನು hot-hell (ನರಕದ ಕುಂಡ) ಎಂದು ಕರೆದರೆ ಅರ್ಥಕಲ್ಕಾ ವಿದ್ಯಮಾನಗಳಿಗೂ ಬಹಳ ಸರಿಬೀಳುವುದು. ಇಂತಹ ಅಸಹ್ಯ ದೃಶ್ಯವನ್ನು ನೋಡುತ್ತ ಇಲ್ಲಿ ನಿಲ್ಲುವುದೂ ಕ್ಷೇಮಕರವಲ್ಲ. ಹೋಗೋಣ!

---

## ದೃಶ್ಯ ೫.—ಬೀದಿ.

(ಸುರೇಂದ್ರನು ಮದ್ಯಪಾನದ ಚತುರ್ಥಾವಸ್ಥೆಯಲ್ಲಿ ಬರುವನು. ಹರಕು ಶರ್ಟು—ದೂಳಿನಿಂದ ಕೂಡಿದ ಹರಕು ವಸ್ತ್ರವನ್ನು ಹೇಗೋ ಹೇಗೋ ಸೊಂಟಕ್ಕೆ ಸುತ್ತಿರುವನು—ನೆಟ್ಟಗೆ ನಿಲ್ಲಲೂ ಸಾಧ್ಯವಿಲ್ಲದೆ ಒಂದು ಕಡೆಯಿಂದ ಮತ್ತೊಂದು ಕಡೆಗೆ ಒಲವುತ್ತ ನಾಲಿಗೆ ಚಲಿಸದವನಂತೆ ಮಾತಾಡುವನು—ನಿದ್ದೆ ಬಂದಂತಾಗುವುದು.)

ಪದ—ಆದಿತಾಳ.

ಬಲು ಪುಣ್ಯ ವಿದೀದಿನ ಮದ್ಯದ ಪಾನಾ—.  
ಮೋಜುಗೀಜನಾ ಕಾಲ । ಸುರೇಂದ್ರರಾಯನ ಪಾನಾ ॥  
ಸ್ವರ್ಗವ ತೋರುವ ಯಿಾ ಪಾನ—ಇದೀಗಾ ಬಲ್, ವಿಶೇಷಾ  
ಬಲ್.—ತಮಾಷಾ ಬಲ್—ದೇವಿಯು ನಿಲ್ಲಲಿ ಬಾಯೊಳಗೆ ॥ ೧ ॥

ಬಲು ಪುಣ್ಯಾದ ದಿಸ ಇದು. ಇ—ಈ—ದು! ಇ—ಇಷ್ಟು ಕುಡಿದ ದಿಸವೇ ಇಇಲ್ಲ! ಆ....ದ....ರೂ ಕಿಂಚಿತ್ತು ಕಿಂಚಿತ್ತು ಮಾತ್ರ ಇಸ್ಟೂ ಬೇಕೆಂದೇ ತೋರುತ್ತದೆ! ದ್ದೇವರಿಗೆ ಬುದ್ಧಿಯಿಲ್ಲ! ಈ—ಈ—ಸ್ಸಮುದ್ರ, ಈ ಹೊಳೆ, ಕ್ಕೆರೆ—ಎಲ್ಲ ಈ—ಈ—ಸುರಾಮಯ ಮ್ಮಾಡಬಾರದಿತ್ತೆ? ಹಾಂ! ನಿ—ನ್ನಿ ನ್ನಿಷ್ಪ್ರಯೋಜಕ ನ್ನೀರಿನಿಂದ ತ್ತುಂಬಿದ್ದು ಏಕೆ? ಹ್ಹೆಡ್ಡು! ದ್ದೇವ್ರು! (ಡಾಕ್ಟರರೊಬ್ಬರ ಶೋಪನ್ನು ನೋಡಿ) ಈ—ಈ—ಡಾಕ್ಟರರು ಶೋಪಾ ತುಂಬ ಮದ್ದಿನ ಬಾಟ್ಲಿ ತ್ತುಂಬಿಸಿದ್ದಾರೆ! ಹುಚ್ಚರು — ಬ್ರಾಂಡಿ ತುಂಬಿಸಿಡುತ್ತಿದ್ದರೆ ಒಂದು ಡ್ರಾಮಿಗೆ ನ್ನೂನ್ನೂರು ರ್‍ರೋಗ ಚಚ್ಚಟ್ಟನೆ ವಾಸಿ! ರ್‍ರೋಗ ಅಂಟಲಾರದು.

ಪದ—ಚಾಪುತಾಳ.

ಅಂಟುರೋಗದ ತಂಟೆ ಬಾರದು ಕೇಳಿ ।<br>
ಬ್ರಾಂಡಿಯು ಗುಟುಕೊಂದು ಕುಡಿರೈಯ್ಯ ॥<br>
ಒಂದೊಂದು ಡ್ರಾಮಿಗೆ ನೂರಾರು ರೋಗಂಗಳ್ ।<br>
ತಟ್ಟನೆ ನಿಂತಿವೆ ನಿಜವೈಯ್ಯಾ ॥ ೧ ॥

ಅಂ! ಏನೆಂದೆ! ಅಯ್ಯೋ! ತಲೆಯೆಲ್ಲ ಸಪ್ಪೆಯಾಯಿತು; ಯಾರಪ್ಪಾ! ಒಂದಿಷ್ಟು ಒಂದಿಷ್ಟು ಬ್ರಾಂದಿ ಕೊಡಿ! ಯಾರೂ ಕೊಡುವುದಿಲ್ಲವೆ? ದಮ್ಮಯ್ಯಾ! ಒಂದಾಣೆ ಕೊಡಿ! ಯಾರೂ ಕೊಡುವುದಿಲ್ಲ! ಮನೆಗೆ ಹೋಗಿ ಏನಾದರೂ ಕಾಸು ತರಲೇ ಬೇಕು—(ಹೋಗುತ್ತ)

ಪದ—ಲಾವಣಿಮಟ್ಟು.

ಬ್ರಾಂಡಿಕುಪ್ಪಿಯ ಬಿಡದೆ ಸೇವಿಸೀ । ಮುಕುತಿ ಪಡೆಯಿರಿ—ನೀವೆಲ್ಲ ॥ ಪ ॥<br>
ಸಗ್ಗದ ಸೌಖ್ಯ—ತಿಳಿವಿರಿ ಆಗ । ಸುಳ್ಳುಮಾತು ನಾನಾಡೆ ॥ ಅ ಪಲ್ಲ ॥<br>
ಹದಿನಾಲ್ಕು ಲೋಕಕೆ ಖ್ಯಾತಿ । ಬ್ರಾಂಡಿ ಸೇವಿಪರ ಜಾತಿ ॥ ೧ ॥<br>
ಜನುಮಮರಣದ ಭೀತಿ । ತೊರೆಯಲುತ್ತಮದ ಯುಕ್ತೀ ॥ ೨ ॥

---

## ದೃಶ್ಯ ೬.—ಸುರೇಂದ್ರರಾಯನ ಮನೆ.

(ಸುರೇಂದ್ರನ ಹೆಂಡತಿ ರಮೆಯು ಹರಕು ಬಟ್ಟೆಯನ್ನುಟ್ಟುಕೊಂಡು ಮಂಗಲ ಸೂತ್ರದ ತಾಳಿಯೂ ಇಲ್ಲದೆ ಅತಿ ದರಿದ್ರಾವಸ್ಥೆಯಲ್ಲಿರುವಳು.)

**ಪದ—(ದೀನಪಾಲಮಾನುನೀಯು . . . ಎಂಬಂತೆ) ದಾದರತಾಳ.**

**ದೀನಳಾದೆ ನಕಟನಾ—ನೇನ ಮಾಡಲೀಗಹಾ ॥ ಪ ॥**
**ಪ್ರಾಣವೇಕೆ ಉಳಿಯಲಿನ್ನು—ಬದುಕಿಯೇನು ಸಾರ್ಥಕ ॥ ಅ. ಪ. ॥**
**ಸರ್ವನಾಶವಾದುದಕಟ । ಪತಿಯ ಪಾದ್ಯ ಪಾನದಿ ।**
**ಪ್ರೇಮ ಭಂಗ—ಮಾನ ಭಂಗ—ವಿತ್ತ ಭಂಗ—ವಾದುದೇ ॥ ೧ ॥**

ಶ್ರೀಮಂತನ ಮಗಳಾಗಿ ಶ್ರೀಮಂತ ವಿದ್ಯಾವಂತನ ಕೈಪಿಡಿದೂ ಏನು ತಾನೇ ಸಾರ್ಥಕ! ಈ ಕುಡಿಕನ ಸಹವಾಸವನ್ನು ಬಿಟ್ಟು ಬಾ ಎಂದು ತಂದೆಯು ಎಷ್ಟು ಹೇಳಿದರೂ ಕೇಳದೆ ಪತಿಯೇ ಪರದೈವವೆಂದು ಬಗೆದು, ಇಲ್ಲಿಯೇ ಉಳಿದುಕೊಂಡುದಕ್ಕೆ—ಹೇ, ದೇವಾ! ಇದೇಯೋ ನೀನು ತೋರುವ ಅನುಗ್ರಹ? ನನ್ನ ಸುಖಸಂಪತ್ತಿನ ಕಾಲದಲ್ಲಿ ನಾನು ಯಾರನ್ನು ದಾಸಿಯನ್ನಾಗಿ ಇಟ್ಟುಕೊಂಡಿದ್ದೆನೋ ಅವಳನ್ನೇ ಈಗ 'ದೇವಿ, ನಿನ್ನಿಂದ ನನ್ನ ಆ ಮುದ್ದು ಶಿಶುವಿನ ಪಾಲನೆಯಾಗಬೇಕು, ಎಲ್ಲಾದರೂ ದೊಡ್ಡ ವರ ಮನೆಯಿಂದ ಗೋದಿ ಬೀಸುವುದಕ್ಕೆ ತಂದು ಕೊಡು, ಅದರ ಕೂಲಿ ಯಿಂದಾದರೂ ದಿನ ದೂಡುತ್ತೇನೆ' ಎಂದು ಅಂಗಲಾಚಿ ಬೇಡಿಕೊಳ್ಳುವ ಅವಸ್ಥೆಯನ್ನೂ, ಹೇ ದೇವಾ, ನೀನು ಕೊಟ್ಟೆಯಾ! ಆದರೂ ನೀನು ಅಪಾರ ಕರುಣಾಳು ಎಂಬುದರಲ್ಲಿ ನನಗೆ ಸಂಶಯವಿಲ್ಲ. ಪತಿಯನ್ನು ಸನ್ಮಾರ್ಗಕ್ಕೆ ತರುವುದಕ್ಕಾಗಿ ಸತಿಯಾದವಳು ಏನೆಲ್ಲಾ ಯತ್ನಗಳನ್ನು ಮಾಡಬಹುದೋ ಅವೆಲ್ಲವನ್ನೂ ಮಾಡಿರುವೆನೆಂಬುದು, ದೇವಾ. ನೀನೇ ಬಲ್ಲೆ! ಆದರೂ ಔಷಧಿಗಾಗಿ ಕಿಂಚಿತ್ ಮಾತ್ರ ಸೇವಿಸಿದ ಮದ್ಯವು ಇಂದು ನನ್ನ ಪ್ರಿಯ ಪತಿಯನ್ನು ಸುರಾಪಾನದ ಅಂತ್ಯಾವಸ್ಥೆಯಲ್ಲಿ ತಂದು ಬಿಟ್ಟಿರು ವುದು! ಧನವು ಹೋಯಿತು, ಹುದ್ದೆಯು ಹೋಯಿತು, ಮಾನವು ಹೋ ಯಿತು—ಆಸ್ತಿಪಾಸ್ತಿ ಮೈಮೇಲಿದ್ದ ಚಿನ್ನಾಭರಣ—ಎಲ್ಲವೂ ಮಾಯವಾ ದುವು! ಇರಲಿಕ್ಕೆ ಇದೊಂದು ಮಾಡಾದರೂ ಇತ್ತು; ಅದೂ ನಿನ್ನೆ ಸಾಲ ಗಾರರ ವಶವಾಯಿತು! ನನ್ನ ಜೀವನ ಸರ್ವಸ್ವನನ್ನು ಇನ್ನು ಆ ಸುರಾ ರಾಕ್ಷಸಿಯಿಂದ ಬಿಡಿಸಲು ಸಾಧ್ಯವಿಲ್ಲ! ಅಯ್ಯೋ! ಹೇಗಿರಲಿ? ಮರ್ಯಾದೆ ತೊರೆದು ಬೀದಿಗಿಳಿದು ಕೂಲೀಗೆಲಸ ಮಾಡಲೆ? ಅದಕ್ಕೂ ಶಕ್ತಿಯೆಲ್ಲಿದೆ? ಹೊಟ್ಟೆ ತಿಂದುತಿಂದು ಎಲುಬುಗಳು ಪುಡಿಯಾದುವು! ನನಗೆ ಇನ್ನು ಒಂದು

ಗಳಿಗೆಯಾದರೂ ಬದುಕಬೇಕೆಂದಿಲ್ಲ. ಆದರೆ—ಹೇ ದೇವಾ! ಆ ನನ್ನ ಮುದ್ದು ಶಿಶುವನ್ನು ಯಾರ ಕೈಯಲ್ಲಿ ಹಾಕಿ ಹೋಗಲಿ! ಅವರು ಎಲ್ಲಿ ಕುಡಿದು ಬಿದ್ದಿದ್ದರೂ ಹುಡುಕಿ ತಂದು ಮನೆಯಲ್ಲಿ ಹಾಕುತ್ತಿದ್ದೆನು; ನಾನು ಹೋದರೆ ಅವರನ್ನು ನೋಡಿಕೊಳ್ಳುವರಾರು? ಇಲ್ಲ, ಇಲ್ಲ, ದೇವಾ, ನೀನು ಕರೆದರೂ ನಾನೊಬ್ಬಳೇ ಬರಲಾರೆನು. ಹೇ ದೇವಾ, ಹೇ ಕರುಣಾಮಯ! ನಾನು ನಿನ್ನನ್ನು ನಿಶ್ಚಲ ಮನಸ್ಸಿನಿಂದ ನಂಬಿದುದು ನಿಜವಾದರೆ, ಇಹದಲ್ಲಿ ನಿನ್ನ ಪ್ರತಿನಿಧಿಯೇ ಪತಿಯೆಂದು ತಿಳಿದು ಭಕ್ತಿಯಿಂದ ಪೂಜಿಸಿದುದು ಸತ್ಯವಾದರೆ, ನನ್ನ ಈ ಒಂದೇ ಒಂದು ಪ್ರಾರ್ಥನೆಯನ್ನು ಸಲ್ಲಿಸು—ನಮ್ಮನ್ನು ಮೂವರನ್ನೂ ಒಂದೇ ಸನಸೆ ಕೊಂಡುಹೋಗು—ದಯಾಮಯ! ಅನಾಥಳಾಗಿ ನಿನ್ನ ಮೊರೆಹೊಕ್ಕಿದವಳ ಈ ಪ್ರಾರ್ಥನೆಯನ್ನು ಕೇಳಲಾರೆಯಾ?

ಪದ—ತ್ರಿವಟ ತಾಳ.

ಶ್ರೀವರನೆ ಬಯಕೆಯನು ಪಾಲಿಸೈ ॥ ಪ ॥
ಕರುಣಿಸು ದೇವಾ— ಇಷ್ಟವನೀಯುತ—ಪತಿಸುತರನ್ನು ಸೇರುತ ॥
ಬರುವೆ ನಿನ್ನಯ ಪಾದದ ಸೇವೆಗೆ—ಸಲ್ಲಿಸು ಪ್ರಾರ್ಥನೆ ಮಾಧವ ॥ ೧ ॥

(ಸುರೇಂದ್ರನು ಪ್ರವೇಶಿಸುವನು.)

ಸುರೇಂದ್ರ:—ಇನ್ನು ಕಿಂಚಿತ್ತು ಮಾತ್ರ ಕುಡಿಯುವುದಿದೆ; ಸ್ವಲ್ಪ ದುಡ್ಡನ್ನು ಕೊಡು.

ರಮೆ:—ಅಯ್ಯೋ! ಎಲ್ಲಿಂದ ಕೊಡಲಿ? ನನ್ನ ಮಂಗಲಸೂತ್ರದಲ್ಲಿ ಒಂದೇ ಒಂದು ತಾಲಿಯನ್ನಿಟ್ಟುಕೊಂಡಿದ್ದೆ, ಅದನ್ನೂ ನೀನೇ ಕೊಂಡು ಹೋದಿರಿ!

ಸುರೇಂದ್ರ:—ಸುಳ್ಳನ್ನಾಡುವೆಯಾ? ಗೋದೀ ಪೀಸಿದ್ದಕ್ಕೆ ದುಡ್ಡು ಸಿಕ್ಕಲಿಲ್ಲವೆ? ಅದನ್ನು ಕೊಡು.

ರಮೆ:—ತಮ್ಮ ಚರಣಸಾಕ್ಷಿಯಾಗಿ ಹೇಳುವೆನು—ಇಂದಿಗೆ ಎರಡು ದಿವಸಗಳಾದುವು—ನನ್ನ ಭಾಗ್ಯಕ್ಕೆ ಆ ಕೆಲಸವೂ ದೊರೆಯಲಿಲ್ಲ! ಉಪವಾಸ ಬಿದ್ದಿರುವೆನು. ಒಟ್ಟೇ ನಾಲ್ಕು ಪಾವಾಣೆಗಳಿದ್ದುವು. ದಿನಕ್ಕೆ ಎರಡೆರಡು ಪಾವಾಣೆಗಳ ಹಾಲನ್ನು ತಂದು ಆ ಮಗುವಿಗೆ ಕುಡಿಸುತ್ತಿದ್ದೇನೆ.

ಆಗ ತಾನೇ ಆ ಕಡೆಯ 2 ಪಾವಾಣೆಯ ಹಾಲೂ ಮುಗಿಯಿತು! ಆ ಮಗುವಿನ ಕೊರಳಾಣೆಯಾಗಿಯೂ ಏನೂ ಇಲ್ಲ.

**ಸುರೇಂದ್ರ:**—ಆ ಮಗುವಿನ ಕೊರಳನ್ನು ಹಿಸುಕಿಬಿಡು! ಒಂದಾಣೆ ವ್ಯರ್ಥಮಾಡಿದೆ!

**ರಮೆ:**—ಒಂದಿಷ್ಟು ಹಾಲೂ ಕೊಡದಿದ್ದರೆ ಅದೆಂತು ಬದುಕೀತು?

**ಸುರೇಂದ್ರ:**—ಏನು! ನನಗಿಲ್ಲದ ದುಡ್ಡು ಆ ಬಾಲಕನಿಗೇ? ಅದು ಬದುಕುವುದು ಬೇಡ; ಕೊಂದೇ ಬಿಡುವೆನು! ಎಲ್ಲಿದೆ? (ಎಂದು ಒಳಗೆ ಓಡುವನು)

**ರಮೆ:**—ಅಯ್ಯೋ! ದಮ್ಮಯ್ಯ! ಅದನ್ನು ಮುಟ್ಟಬೇಡಿರಿ (ಎಂದು ಕೂಗುತ್ತ ಒಳಗೆ ಓಡುವಳು. ಅಷ್ಟರಲ್ಲಿ ಪೆಟ್ಟಿನ ಶಬ್ದವೂ ಮಗುವಿನ ಚೀತ್ಕಾರವೂ ಕೇಳಬರುವುದು. 'ಅಯ್ಯೋ ದೇವರೇ! ಅಯ್ಯೋ ನನ್ನ ಕಂದಾ! ಹೋದೆಯಾ! ನನ್ನನ್ನೂ ಕೊಂದುಬಿಡಿರಿ! ಅಷ್ಟೊಂದು ದಯೆತೋರಿ' ಎಂದು ರಮೆಯು ದುಃಖಿಸುವುದೂ ಕೇಳುವುದು. 'ಅದೂ ಸಾಯಲಿ, ನೀನೂ ಸಾಯು' ಎಂದು ಸುರೇಂದ್ರನ ಕೋಪದ ನುಡಿಯೂ ಪೆಟ್ಟಿನ ಸದ್ದೂ ರಮೆಯು 'ಅಯ್ಯೋ! ಸತ್ತೆ!' ಎಂದು ಕೂಗಿದ ಆರ್ತಧ್ವನಿಯೂ ಕೇಳಬರುವುದು. ಅಷ್ಟರಲ್ಲಿ ನೆರೆಕರೆಯವರು ಓಡಿಬರುವರು. ಪರದೆಯು ಮೇಲಕ್ಕೆತ್ತಲ್ಪಟ್ಟು ಭೀಕರ ದೃಶ್ಯವು ತೋರುವುದು. ರಮೆಯು ತಲೆಗೆ ಪೆಟ್ಟಾಗಿ ಮುಖವೆಲ್ಲ ರಕ್ತಮಯವಾಗಿರುವುದು. ಉಟ್ಟ ವಸ್ತ್ರವು ರಕ್ತದ ಬಿಂದುಗಳಿಂದ ತೊಯ್ದಿರುವುದು. ರಕ್ತವಾಗಿದ ಒಂದು ದೊಣ್ಣೆಯು ರಮೆಯ ಬಳಿಯಲ್ಲೇ ಬಿದ್ದಿರುವುದು. ತಲೆಯೊಡೆದು ರಕ್ತಮಯವಾದ ಮಗುವು ಸ್ವಲ್ಪ ದೂರದಲ್ಲಿ ಬಿದ್ದಿರುವುದು. ಸುರೇಂದ್ರನು ಒಂದು ಬದಿಯಲ್ಲಿ ಭ್ರಾಂತನಾಗಿ ನಿಂತಿರುವನು. ನೆರೆಯವರಲ್ಲೊಬ್ಬನು ಮಗುವಿನ ಬಳಿಗೆ ಓಡುವನು. ಮತ್ತೊಬ್ಬನು ರಮೆಯ ಬಳಿಗೆ ಬಂದು ನೋಡಿ) 'ಅಯ್ಯೋ! ತಲೆ ಒಡೆದು ಹೋಗಿದೆಯಪ್ಪಾ, ಸ್ಮೃತಿಯಿಲ್ಲ, ಸ್ವಲ್ಪ ನೀರು ತನ್ನಿ!'

**ಮಗುವಿನ ಬಳಿಗೆ ಹೋದವ:**—'ಅಯ್ಯೋ! ಖೂನಿ! ಈ ದುಷ್ಟನೇ ಇದೆಲ್ಲಾ ಮಾಡಿರಬೇಕು. (ಅಷ್ಟರಲ್ಲಿ ಮತ್ತೊಬ್ಬನು ನೀರು ತಂದು ರಮೆಯ ಹಣೆಗೆ ಕಣ್ಣಿಗೆ ಮುಟ್ಟಿಸುವನು. ರಮೆಯ ತಲೆಗೆ ಬೆಂಡೇಜ್ ಕಟ್ಟುವನು. ಕಟ್ಟುತ್ತ ಮತ್ತೊಬ್ಬನನ್ನು ಕುರಿತು) 'ರಾಮಯ್ಯ, ನೀವು ಓಡಿಹೋಗಿ ಡಾಕ್ಟರರನ್ನು ಕರೆತನ್ನಿ (ಇನ್ನೊಬ್ಬನನ್ನು ಕುರಿತು) ನೀವು ಹೋಗಿ ಕೂಡಲೇ ಪೋಲೀಸು ಸ್ಟೇಶನಿಗೆ

ತಿಳಿಸಿ, ಈ ದುಷ್ಟ ಪಿಶಾಚಿಯನ್ನು ಪಾಶಿಗೆ ಹಾಕಿಸಬೇಕು' (ಎನ್ನುವನು ಅಷ್ಟರಲ್ಲಿ ರಮೆಯು ಚೇತರಿಸಿ, ಕೊನೆಯ ಮಾತನ್ನು ಕೇಳಿ—)

ರಮೆ:—ಅಯ್ಯೋ, ಪೋಲೀಸು ಬೇಡ—ಇವರೇನೂ ಮಾಡಲಿಲ್ಲ, ಹಾಗೆಂದು ಯಾರು ಹೇಳಿದರು? ಡಾಕ್ಟರರೂ ಬೇಡ, ಅಷ್ಟೊಂದು ಗಾಬರಿಯಿಲ್ಲ—

**ನೆರೆಯವರಲ್ಲೊಬ್ಬ:**—ಅಮ್ಮಾ, ಮಗುವನ್ನು ಹೊಡೆದು ಕೊಂದವರಾರು? ನಿಮ್ಮ ತಲೆಯೊಡೆದವಾರಾರು? ಈ ದುಷ್ಟನಲ್ಲವೆ?

ರಮೆ:—ಅಲ್ಲ! ಅಲ್ಲ! ಅವರಲ್ಲ! ದೇಹಾಲಸ್ಯದಿಂದ ಆಗಾಗ ನನಗೆ ಮೂರ್ಛೆ ಆಗುವುದಿತ್ತು—ಎರಡು ದಿನಗಳಿಂದ ಉಪವಾಸ! ತಲೆ ತಿರುಗುತಿತ್ತು; ಮಗುವನ್ನು ಹಿಡಕೊಂಡು ಉಪ್ಪರಿಗೆ ಮೆಟ್ಟಲಿಂದ ಕೆಳಗಿಳಿಯುತ್ತಿದ್ದೆ—ತಲೆತಿರುಗಿ ಬಿದ್ದೆ! ಮಗುವು ಅಪ್ಪಳಿಸಿದಂತಾಗಿ ಮೃತಿಯನ್ನೈದಿರಬಹುದು. ನನಗೂ ಪೆಟ್ಟಾಯಿತು!

ಮತ್ತೊಬ್ಬ:—ಹಾಗಾದರೆ ಈ ದೊಣ್ಣೆಗೆ ಹೇಗೆ ರಕ್ತವಾಯಿತು!

ರಮೆ:—ದೊಣ್ಣೆಯನ್ನು ಆಧಾರಕ್ಕಾಗಿ ಹಿಡಕೊಂಡಿದ್ದೆ. ಬಿದ್ದ ಭರಕ್ಕೆ ಏಳಲಾರದಾದೆನು—ಬಳಿಯಲ್ಲೇ ಬಿದ್ದಿದ್ದ ದೊಣ್ಣೆಯನ್ನು ಹಿಡಿದು ಏಳಲಿಕ್ಕೆ ಯತ್ನಿಸಿದೆ—ಆದರೆ ಅಲ್ಲೇ ಸ್ಮೃತಿತಪ್ಪಿ ಬಿದ್ದೆ! ನನ್ನ ತಲೆಯ ರಕ್ತದಿಂದ ಅದು ತೊಯ್ದಿರಬಹುದು. ಇವರು ಹೊರಗಿದ್ದವರು ನಾನು ಬಿದ್ದುದು ಕೇಳಿ ಒಳಕ್ಕೆ ಓಡಿಬಂದು ಇದೆಲ್ಲಾ ನೋಡಿ ಭ್ರಾಂತರಂತೆ ನಿಂತಿದ್ದಾರೆ!

ಮತ್ತೊಬ್ಬ:—ಅಮ್ಮಾ, ಇದೆಲ್ಲಾ ನಿಜವೆ? ಈ ಪಿಶಾಚಿಯ ಮೇಲೂ ಇಷ್ಟು ಕರುಣೆಯೆ? ಇಷ್ಟು ಪತಿಭಕ್ತಿಯೆ?

ರಮೆ:—(ಮರಣೋನ್ಮುಖರಾದವರು ಮಾತಾಡುವಂತೆ ಅರ್ಧಮರ್ಧವಾಗಿ) ನಿಜವಲ್ಲದೆ ಮತ್ತೇನು? ನನ್ನ ಮಾತಿನಲ್ಲಿ ವಿಶ್ವಾಸವಿಲ್ಲವೆ? ನನ್ನದೊಂದು ಪ್ರಾರ್ಥನೆಯಿದೆ—ನಾನೆಲ್ಲಾದರೂ ಸತ್ತರೆ ಅದಕ್ಕೆ ನನ್ನ ಈ ಸರ್ವಸ್ವನನ್ನು ಗುರಿಪಡಿಸಬೇಡಿರಿ! ನನ್ನನ್ನು ನಿಮ್ಮ ಒಡಹುಟ್ಟಿದೆಂದು ತಿಳಿದು ಸ್ಮಶಾನಯಾತ್ರೆ ಮಾಡಿಸಿ; ಹೆಣ್ಣುಜನ್ಮದ ಮರ್ಯಾದೆಯನ್ನು ಕಾಪಾಡಿರಿ!

ಇನ್ನೊಬ್ಬ:—(ಸುರೇಂದ್ರನನ್ನು ಕುರಿತು) ಏ ಪಾಪೀ! ಕೇಳು, ಪತಿವ್ರತೆಯ ಮಾತನ್ನು ಕೇಳು—ಇವಳಿಂದು ಹೀಗೆ ಪ್ರಾರ್ಥಿಸಿಕೊಳ್ಳದಿದ್ದರೆ ನಿನ್ನ ಈ ಘೋರಕೃತ್ಯಕ್ಕೆ ಏನಾಗುತಿತ್ತು? ಯೋಚಿಸು—ಮೂರ್ಖ! ನೋಡು, ಇನ್ನಾದರೂ ಕಣ್ತೆರದು ನೋಡು—ಚೆನ್ನಾಗಿ ನೋಡು—ಈ ನಿನ್ನ ದುಷ್ಕೃತ್ಯದ ದೃಶ್ಯವನ್ನು! (ಎಂದು ಹೋಗುವರು.)

(ಅಷ್ಟರಲ್ಲಿ ಸುರೇಂದ್ರನ ಮತ್ತತೆಯು ಇಳಿದು ಹೋಗಿ—ತಾನು ಮಾಡಿರುವ ಘೋರ ಕೃತ್ಯವನ್ನು ಮನಕಾಣುವನು. ರಮೆಯು ಆಡಿದ ಮಾತುಗಳು ತೀಕ್ಷ್ಣವಾಗಿ ನಾಟುವವು. ಸುರಾಪಾನದಿಂದ ಬಲಗುಂದಿದ ಆತನ ಮನಸ್ಸಿಗೆ ಭೀಕರ ದೃಶ್ಯಗಳು ತೋರಿಬರುವವು.)

ಸುರೇಂದ್ರ:—ತೆರೆಯಿತು, ನನ್ನ ಕಣ್ಣು ತೆರೆಯಿತು! ಈ ಪತಿವ್ರತೆಯು ನನ್ನ ಕಣ್ಣುಗಳನ್ನು ತೆರೆದಿರುವಳು! ಅಯ್ಯೋ! ರಮಾ ನಿನ್ನ ಈ ದಿವ್ಯ ಜ್ಯೋತಿಯು ಆರಿಹೋದ ಬಳಿಕ ನನಗೆ ಎಲ್ಲಾ ಗಾಢಾಂಧಕಾರ! ಅಯ್ಯೋ! ನನ್ನ ಭೀಕರ ಚರಿತೆಯು ಮೂರ್ತಿವತ್ತಾಗಿ ನನ್ನ ಕಣ್ಣೆದುರಿಗೆ ನಿಂತಿರುವುದು! ನೋಡಲಾರೆ! ಬದುಕಲಾರೆ! ರಮಾ, ನಾನು ನಿನ್ನೊಂದಿಗೇ ಬರುವೆನು.

ರಮಾ:—ನಾಥಾ, ನನ್ನ ಬಳಿಗೆ ಬಂದು ಕೂತುಕೊಳ್ಳಿರಿ.

ಸುರೇಂದ್ರ:—ನಿನ್ನ ಬಳಿಗೆ ಬರಲೆ? ಈ ಪಾಪಿಯು ಬರಲೆ?

ರಮಾ:—ಬನ್ನಿ, ಬನ್ನಿ, ನನ್ನ ಪ್ರಾಣ ಸರ್ವಸ್ವ, ಬನ್ನಿ, (ಸುರೇಂದ್ರನು ಬಳಿಗೆ ಬಂದು ಕೂತುಕೊಳ್ಳುವನು) ನನ್ನ ತಲೆಯನ್ನು ನಿಮ್ಮ ತೊಡೆಯ ಮೇಲಿಟ್ಟುಕೊಳ್ಳಿ! ನಿಮ್ಮ ಕೈಗಳಿಂದ ನನ್ನ ಕೈಗಳನ್ನು ಹಿಡಿದುಕೊಳ್ಳಿ! ಪುಣ್ಯಮೂರ್ತಿಯಾದ ನಿಮ್ಮ ಮುಖವನ್ನು ನಾನು ನೋಡುತ್ತ ನೋಡುತ್ತ ನಿಮ್ಮಿಂದ ಬೀಳ್ಕೊಳ್ಳುವೆನು!

ಸುರೇಂದ್ರ:—ರಮಾ, ದೇವತಾಸ್ವರೂಪಿ! ನಿನ್ನನ್ನೆಂತಹ ದುರವಸ್ಥೆಗೆ ತಂದೆನು! ನಾನು ಪಾಪಿ! ತ್ರಿಲೋಕವನ್ನು ಬೆಳಗುವ ಪುಣ್ಯಶಾಲಿಯು ನೀನು! ಅದೋ, ನನ್ನ ಜನ್ಮದ ಸಂಚಿತ ಪಾಪವು ಭಯಂಕರ ಸ್ವರೂಪದಿಂದ ನನ್ನೆದುರಿಗೆ ಬಂದು ನಿಂತಿರುವುದು! ಅಯ್ಯೋ ಬಾಯಿಯನ್ನು ತೆರೆದು ನನ್ನನ್ನು ನುಂಗಲು ಬರುವುದು! ನಿನ್ನ ಪುಣ್ಯಮೂರ್ತಿಯ ಭಯದಿಂದ

ಸಮಾಪಿಸದೆ ನಿಂತಿರುವುದು! ನೀನು ಹೋದರೆ, ಅದು ನನ್ನನ್ನು ಬಿಡದು! ರಮಾ, ನನ್ನನ್ನು ರಕ್ಷಿಸು! ನಿನ್ನೊಡನೆಯೇ ನಾನೂ ಬರುವೆನು!

ರಮಾ—(ಪ್ರಾಣೋತ್ಕ್ರಮಣದ ವೇದನೆಯನ್ನು ಸಹಿಸಿಕೊಳ್ಳುತ್ತ ನಿಧಾನ ನಿಧಾನವಾಗಿ) ದೇವಾ, ತಾವು ಸುಮ್ಮನೆ ಕಳವಳ ಪಡಬೇಡಿರಿ! ಮೊದಲೇ ಕ್ಷೀಣವಾಗಿರುವಿರಿ! ನನಗಾಗಿ ವ್ಯಸನಪಡುವುದೇಕೆ? ಹೀಗೆ ತಮ್ಮ ತೊಡೆಯ ಮೇಲೆ ತಲೆಯಿಟ್ಟುಕೊಂಡು, ತಮ್ಮ ಮುಖವನ್ನು ನೋಡುತ್ತ, ನನ್ನ ಗುಣವನ್ನು ನೀವು ಹೊಗಳುವುದನ್ನು ಕೇಳುತ್ತ, ಪ್ರಾಣಬಿಡುವ ಈ ಭಾಗ್ಯವು ಯಾರಿಗೆ ಇರುವುದು? ನಾನು ಕೃತಾರ್ಥಳಾದೆ! ಅದಕ್ಕಾಗಿ ನಾನು ದುಃಖಿಸುವುದಿಲ್ಲ! ಆದರೆ ಇದುವರೆಗೆ ನಾನು ತಮ್ಮ ಸೇವೆ ಮಾಡ ಲಿಕ್ಕಿದ್ದೆ. ಇನ್ನಾರು ಇರುವರು? ನಿಮ್ಮ ಗತಿಯೇನು? ಆದರೂ ಚಿಂತೆ ಯಿಲ್ಲ;—ನನ್ನ ಈ ಕೊನೆಯ ಪ್ರಾರ್ಥನೆಯನ್ನು ತಾವು ನಲ್ಲಿಸುವುದಾದರೆ ನೀವು ನನ್ನೊಡನೆ ಬರಬೇಕಾಗಿಲ್ಲ—ತಮಗೆ ಸರ್ವ ಮಂಗಳವಾಗುವುದು— ನಲ್ಲಿಸುವಿರಾ?

ಸುರೇಂದ್ರ:—ಅದೇನು? ಹೇಳು—ರಮಾ, ಹೇಳು!

ರಮಾ:—(ಬಹು ಮಂದಗತಿಯಿಂದ ಅಲ್ಲಲ್ಲಿ ನಿಲ್ಲಿಸಿ) ಇನ್ನು ಮುಂದೆ ತಾವು ಸುರಾಪಾನವನ್ನು ಮಾಡುವುದಿಲ್ಲವೆಂದು ನನ್ನ ತಲೆಯ ಮೇಲೆ ಕೈಯಿಟ್ಟು ಪ್ರಮಾಣ ಮಾಡಿರಿ! ಸಂತೋಷದಿಂದ ತೆರಳುವೆನು! ಏನು! ಮಾತಾಡುವುದಿಲ್ಲವೇಕೆ? ಹೇಳಿರಿ! ಹೇಳಿರಿ!

ಸುರೇಂದ್ರ:—ರಮಾ—ಹಿಂದೆ ನಾನು ಸುರಾಪಾನದ ಪ್ರಥಮಾ ವಸ್ಥೆಯಲ್ಲಿದ್ದಾಗ ಎಷ್ಟೋ ಸಲ ಪ್ರತಿಜ್ಞೆ ಮಾಡಿದ್ದೆನು; ಆಗ ಅದನ್ನು ಪಾಲಿ ಸಲೂ ಸಾಧ್ಯವಿತ್ತು; ಆದರೆ ಈ ಅಧಮನಿಂದ ಅದೂ ಆಗದೆ ಹೋಯಿತು! ಈಗ ಸುರಾಪಾನದ ಪರಮಾವಸ್ಥೆಯಲ್ಲಿರುವೆನು—ಇಂತಹ ಉನ್ಮಾದಾ ವಸ್ಥೆಯಲ್ಲಿ ಸುರೆಯೂ ನಾನೂ ಅನ್ಯೋನ್ಯ ಬೆರೆತುಹೋಗಿರುವೆವು— ಒಂದು ಕ್ಷಣವಾದರೂ ಅದನ್ನು ಬಿಟ್ಟಿರಲು ಸಾಧ್ಯವಿಲ್ಲ—ಇಲ್ಲ—ಇಲ್ಲ. ಅದನ್ನು ಮಾತ್ರ ಬಿಟ್ಟು ಬದುಕಲು ಸಾಧ್ಯವಿಲ್ಲ ರಮಾ, ಕ್ಷಮಿಸು!

ರಮೆ:—ಹಾ! ಹಾ! ಹಾ! ಹಾ--ಗಾ--ದ--ರ—ಪ್ರಿಯಾ, ನಾ--ಥಾ, ಬನ್ನಿ, ಬನ್ನಿ, ನನ್ನೊಡನೆ ಬನ್ನಿ, ಇದೋ—ನಾನು—ಹೊ--ರ--ಟೆ--ನು—ಸು--ರೇಂ--ದ್ರ! (ಪ್ರಾಣ ಬಿಡುವಳು.)

ಸುರೇಂದ್ರ:--ಏನು! ನನ್ನನ್ನು ಬಿಟ್ಟುಹೋದೆಯಾ! ಅಯ್ಯೋ ಅಯ್ಯೋ! ಆ ಭಯಂಕರ ರೂಪವು ನನ್ನನ್ನು ನಪೀಡಿಸುತ್ತಿರುವುದು! ಅದರ ಕಣ್ಣುಗಳು! ಅದರ ಬಾಯಿ! ಅದರ ದಾಡೆಗಳು! ಭಯಂಕರ, ಭಯಂಕರ! ರಮಾ, ರಮಾ! ರಕ್ಷಿಸು! ರಕ್ಷಿಸು! ಬಂದೆ, ಬಂದೆ! ಆ ಪಿಶಾಚಿಯನ್ನು ಒಂದು ಕ್ಷಣ ಹಿಂದೋಡಿಸು! (ಎಂದು ದೂರವಲ್ಲಿಟ್ಟಿದ್ದ ಬಾಟ್ಲಿಯ ಕಡೆಗೆ ಓಡಿ ಹೋಗಿ ಅದರಲ್ಲಿದ್ದ ಬ್ರಾಂಡಿಯನ್ನು ಕುಡಿಯುತ್ತ) ರಮಾ! ನಿಲ್ಲು! ಬಂದೆ! ಆ ಪಿಶಾಚಿ! ಭಯಂಕರ! ನಿಗಿಯುವುದಕ್ಕೆ ಬರುವುದು! ಕುದಿಯುವ ಲೋಹ ವನ್ನು ಬಾಯಿಗೆ ಸುರಿಯುವುದಂತೆ! ರಮಾ! ಇಗೋ ಬಂದೆ! (ಎಂದು ಮತ್ತೊಂದು ಕಡೆಗೆ ಓಡಿಹೋಗಿ ಅಲ್ಲಿದ್ದ ಚೂರಿಯನ್ನು ತೆಗೆದು) ರಮಾ, ರಕ್ಷಿಸು! ಇಗೋ! ಬಂದೆ! (ಎಂದು ಎದೆಗೆ ಚೂರಿ ಹಾಕಿಕೊಂಡು) ರ--ಮಾ—ಪ್ರಿಯೆ—ದೇವತಾ ಸ್ವರೂಪಿ! ದಯೆ--ತೋ--ರು (ಎನ್ನುತ್ತ ಬೀಳುವನು.)

(ಪರದೆಯು ಬೀಳುವುದು.)

---

## ದೃಶ್ಯ ೩ —ಬೀದಿ.

(ಆರೋಗ್ಯಭಜನಾಮಂಡಳಿಯವರು ತಾಳತಂಬೂರಿಗಳನ್ನು ಹಿಡಕೊಂಡು ಆರೋಗ್ಯ ಗೀತೆಯನ್ನು ಹಾಡುತ್ತ ಹಸ್ತಪ್ರತಿಗಳನ್ನು ಹಂಚುತ್ತ ಆರೋಗ್ಯ ಸೂತ್ರಗಳನ್ನು ಬರೆದ ಪತಾಕೆಗಳನ್ನು ಎತ್ತಿ ಹಿಡಿದುಕೊಂಡು ಬರುವರು.)

ಪದ—ಮುದಲಾಸಿ ಮುಟ್ಟು.

ಗರ್ಭಿಣಿಯರೆ ನೀವು ಬೆದರಲುಬೇಡಿ । ಪ್ರಸವವೆಂಬುದು ನೈಸರ್ಗಿಕ ಕಾರ್ಯ ನೋಡಿ ॥
ಹದಗೆಲಸ ಹದದೂಟ ಸಡಿಲಾದ ಉಡಿಗೆ । ಒದಗಿಸಿಕೊಡುವುದು ಸುಲಭದ ಹೆರಿಗೆ ॥ ೧ ॥

ನಡುಬೆಳೆವಣಿಗೆಗೆ ಎಡೆಗೊಡೆ ಸುಖವು । ನಡುಗಟ್ಟು ಬಿಗಿಗೈವರಿಗೆ ಪ್ರಸವ ನೋವು ॥
ನಡುಕತರುವ ಹೆರಿಗೆಯ ಕಥೆಗಳಿಗೆ । ಕೊಡಬೇಡಿ ಕಿವಿಗಳ ಗುಡುಗುವ ದನಿಗೆ ॥ ೨ ॥

ನಿರ್ಮಲ ಯೋಚನೆ ಕುಶಲದುದ್ಯೋಗ । ಧರ್ಮಬುದ್ಧಿಯ ಶಿಶುಜನಿಸುವ ಯೋಗ ॥
ಖಾರದ ವಸ್ತುವನೆತ್ತಲುಬೇಡಿ । ಬರೆಗೊಂಬೆಯಂತೆ ಕುಳಿತುಕೊಳ್ಳಬೇಡಿ ॥ ೩ ॥

ಪ್ರಸವದ ದಣುತಾಳೆ ಧೈರ್ಯವು ಬೇಕು । ಅರಿವಿದ್ದ ಸೂಲಗಿತ್ತಿಯು ಬಳಿಬೇಕು ॥
ಉಲ್ಬವು ಸರಿಯಾಗಿ ಹೊರಬೀಳಬೇಕು । ಗರ್ಭಾಶಯದ ಕೊಳೆ ಸ್ರವಿಸಲುಬೇಕು ॥ ೪ ॥

ಗರ್ಭಕೋಶವು ನಿಜಸ್ಥಿತಿ ಹೊಂದಬೇಕು । ನಿರ್ಭಯನಿಮಗಾಗ ಯಿವನೋಡಬೇಕು ॥
ಪ್ರಸವದ ದಣುವಾರೆ ವಿಶ್ರಾಂತಿ ಮುಖ್ಯ! । ಜೀರ್ಣಸಹಿತವಾದ ಆಹಾರ ಸೌಖ್ಯ ॥ ೫ ॥
ಗಾಳಿಬೆಳಕುಬಹ ಕೋಣೆಯೊಳ್ಮಲಗಿ । ಕೊಳಕು ಬಟ್ಟೆಗಳಲ್ಲಿ ಇಡಬೇಡಿ ಹುಡುಗಿ ॥
ತಲೆಯಿಂದ ಹಾಸಿಗೆ ಇಳಿಯಾಗಿ ಹಾಸಿ । ಮಲಗಿರಿ ಬಹುತರ ಬೇನೆಗೆ ವಾಸಿ ॥ ೬ ॥
ಬೆಚ್ಚಗೆ ತನುವನು ಇರಿಸಲು ಬಟ್ಟೆ । ಮುಚ್ಚಿಕೊಳ್ಳಲುಬೇಕು ಮುಖವನು ಬಿಟ್ಟೆ ॥
ಬೆನ್ನಡಿಬೀಳ್ವಂತೆ ಉದ್ದಂಡ ಶಯನ । ಉನ್ನತ ಶಿರೋರ ವಿವುಬೇನೆ ಶಮನ ॥ ೭ ॥

# ಚತುರ್ಥಾಂಕ.

## ದೃಶ್ಯ ೧.

(ಆರೋಗ್ಯಪ್ರತಾಪನ ಆಸ್ಥಾನ—ಆರೋಗ್ಯಪ್ರಚಾರ ಮಂಡಳಿಯ ಸ್ತ್ರೀಪುರುಷ ರೆಲ್ಲರೂ ಇರುವರು.)

**ಆರೋಗ್ಯಪ್ರತಾಪ:—**

**ಪದ—ರಾಗ ಕೇದಾರ—ಝಂಪೆ ತಾಳ.**

**ಬಾಲಾವಳಿ ಪ್ರೀತೆ । ಸ್ತ್ರೀಲೋಕ ವಿಖ್ಯಾತೆ । ಗೈದಾ ಮಹಾ**
**ಕಾರ್ಯ ವರುಹಾ ವಿಚಾರ ॥ ಪಲ್ಲ ॥**
**ಸುಕ್ಷೇಮಪ್ರಚಾರ—ಯತುನ ವಿಶಾಲದಿ—ನಾರೀ ನೀ ಗೈದಿಹ**
**ವಿಹಿತ ಸುಕಾರ್ಯ ॥ ೧ ॥**

ಆರೋಗ್ಯಸುಂದರಿ, ಈ ಶಿಶುಸಪ್ತಾಹದಲ್ಲಿ ನೀನೂ ನಿನ್ನ ದಳದವರೂ ಏನೇನು ಪ್ರಚಾರಕಾರ್ಯ ಮಾಡಿದಿರಿ?

**ಆರೋಗ್ಯಸುಂದರಿ:**—ಮಹಾರಾಜ, ನಾವು ಅನೇಕ ಮನೆಗಳನ್ನು ಸಂದರ್ಶಿಸಿದೆವು. ಅಲ್ಲಿಯ ಸ್ತ್ರೀಯರ ಅಜ್ಞಾನವನ್ನು ಏನೆಂದು ಹೇಳಲಿ! ಒಂದು ಮನೆಯಲ್ಲಿ ಎಷ್ಟೋ ದಿವಸಗಳಿಂದ ಮಗುವನ್ನು ತೊಟ್ಟಿಲಲ್ಲಿ ಇಟ್ಟ ಕೂಡಲೆ ಅದು ಕೂಗುತ್ತಿತ್ತಂತೆ; ವಿಭೂತಿ ಹಾಕಿಯಾಯಿತು, ಯಂತ್ರ ಕಟ್ಟಿಯಾಯಿತು, ತೊಟ್ಟಿಲ ಅಡಿಯಲ್ಲಿ ಹೊಗೆಯೊಡ್ಡಿಯಾಯಿತು, ನಿಮಿತ್ತ ಕೇಳಿ ತಹತಟ್ಟು ಮಾಡಿಯಾಯಿತು, ಆ ಕೋಣೆಯೊಳಗೆ ಏನೋ ಪಿಶಾಚಿ ಇದೆಯೆಂದು ಬೇರೆ ಕೋಣೆಯಲ್ಲಿ ತೊಟ್ಟಿಲು ಕಟ್ಟಿ ನೋಡಿಯಾಯಿತು, ಕಡೆಗೆ ಆ ತೊಟ್ಟಿಲನ್ನು ಮಾಡಿದ ಮರದಲ್ಲೇ ಏನೋ ಪಿಶಾಚವು ವಾಸ ವಾಗಿರಬೇಕೆಂದು ಅದಕ್ಕೊಂದು ಹಳೆಯ ಪಾದರಕ್ಷೆಯನ್ನು ತೂಗಿಸಿಯೂ ಆಯಿತು! ಆದರೆ ತೊಟ್ಟಿಲಲ್ಲಿ ಮಗುವನ್ನಿಟ್ಟ ಕೂಡಲೆ ಅದು ಕೂಗುವುದು ಮಾತ್ರ ಬಿಡಲಿಲ್ಲವಂತೆ! ಇದೊಂದು ಪರಮಾಶ್ಚರ್ಯವೆಂದು ಅನೇಕ ಸ್ತ್ರೀ ಯರು ಗುಂಪುಕೂಡಿದ್ದರು. ಅವರೆಲ್ಲರೂ ನನ್ನನ್ನು ಸುತ್ತಿಕೊಂಡು— 'ಏನಮ್ಮಾ, ಆರೋಗ್ಯಸುಂದರಿಯಮ್ಮನವರೇ, ದೈವದ ಉಪದ್ರವಿದೆಯೆಂದು

ಈಗಲಾದರೂ, ಇದನ್ನು ನೋಡಿಯಾದರೂ, ನಂಬುವಿರಾ? ಏನು?' ಎಂದು ಪರಿಹಾಸ್ಯಗೈದರು. ಇಂತಹ ಸ್ತ್ರೀಯರ ಅಜ್ಞಾನವನ್ನು ಏನೆಂದು ಬಣ್ಣಿಸಲಿ!

**ಪದ—ದುಮಾಳಿ ತಾಳ.**

**ಸ್ತ್ರೀಯರತೀ ಅಜ್ಞಾನಿಗಳಾಗಿಹರ್ । ಸ್ತ್ರೀಯರತಿ ಅಜ್ಞಾನಿ ॥ ಪ ॥**
**ತಿಳಿಯರು ಶಿಶುಗಳ । ಕ್ಷೇಮದ ಮಾರ್ಗವ । ಮುಳುಗಿಹರ್ಯೆಯ ।**
**ಜ್ಞಾನದಿ ತೊಳಲುತ ॥ ೧ ॥ ದೈವದ ನೋಟದಿ—ದೃಷ್ಟಿಯ**
**ಮಾಟದಿ—ಕುಂದಿತು ಮಗುವೆಂ—ದೆಂಬುವರವರು ॥ ೨ ॥**

ಆರೋಗ್ಯಪ್ರತಾಪ:—ಆಗ ನೀನು ಬಲು ಸಂಕಟಕ್ಕೆ ಬಿದ್ದಿರಬೇಕು; ಅನಂತರವೇನಾಯಿತು?

ಆರೋಗ್ಯಸುಂದರಿ:—ಆ ಕೋಣೆಗೆ ಹೋಗಿ ನೋಡಬೇಕೆಂದೆನು, ಕರೆದುಕೊಂಡು ಹೋದರು. ಕತ್ತಲಾದ ಪಡಸಾಲೆಯಿಂದ ಅದರೊಳಗೆ ಹೋಗಲಿಕ್ಕೆ ಚಿಕ್ಕದೊಂದು ಬಾಗಿಲು, ಕೋಣೆಯಲ್ಲಿ ಹಗಲಲ್ಲೂ ಅಮಾವಾಸೆಯ ರಾತ್ರಿ! ಕಿಟಿಕಿಗಳೇ ಇಲ್ಲ. ಬಾಣಂತಿಗೆ ಶೀತತಾಗುವುದಂತೆ! ಅವಳ ಹಾಸಿಗೆಯೂ ಅಲ್ಲೇ. ಗುಮ್ಮೆಂದು ಸೂತಕದ ವಾಸನೆ ಹೊಡೆಯುತ್ತಿತ್ತು. ತೊಟ್ಟಿಲನ್ನು ಹೊರಗೆ ಅಂಗಳಕ್ಕೆ ತರಿಸಿ ಪರೀಕ್ಷಿಸಿದೆನು—ಅದರಲ್ಲಿ ಉದ್ದಕ್ಕೊಂದು ಬಿರುಕು! ಅದರಲ್ಲಿ ಸಿಪಾಯಿಗಳನ್ನು ಲ್ಯಾನ್ ಮಾಡಿದಂತೆ ತಗಣೆಗಳ ಒಂದು ಸಾಲು!! 'ನೋಡಿರಮ್ಮಾ, ಉಪದ್ರವ ಕೊಡುವ ದೈವಗಳ ತಂಡವೇ ಇಲ್ಲಿದೆ' ಎಂದು ಅವರಿಗೆಲ್ಲ ತೋರಿಸಿದೆ; ಎಲ್ಲರೂ ಅವಾಕ್ಕಾದರು. ಶಿಶುಗಳು ಮಲಗುವಲ್ಲಿ ಬಹು ಜಾಗರೂಕರಾಗಿರುವಂತೆ ಅವರಿಗೆ ಈ ಜೋಗುಳ ಪದವನ್ನು ಕಲಿಸಿಕೊಟ್ಟೆನು—

**ಪದ—(ಹೇಗೆ ಪಾರಮಾಡುವೀ . . . ಎಂಬಂತೆ) ರೂಪಕ ತಾಳ.**

**ಜಾಗರೂಕರಾಗಿರಿ—ಮಗುವು ಮಲಗುವಲ್ಲಿ ।**
**ಬರಿದೈವದ ಕಾಟವು—ಯೆನ್ನಬೇಡಿ ॥ ಪಲ್ಲ ॥**
**ತೊಟ್ಟಿಲೊಳಗೆ ನೋಡಿ—ಬಟ್ಟೆಗಳಲಿ ನೋಡಿ—**
**ಕಿಟಿಕಿ ಕದಗಳನು—ವಾಯು ಚಲನೆಗಾಗಿ—**
**ತೆರೆಯುತ ಮಗುವಿನ—ಮೈಗೆ ಹೊದಿಕೆಯಿಟ್ಟು ॥ ೧ ॥**

ಮತ್ತೊಂದುಕಡೆ ವೈಯಾರಿಯೊಬ್ಬಳು ತನಗೆ ಎದೆಹಾಲಿದ್ದರೂ ಮಗುವಿಗೆ ಬುಡ್ಡಿಯ ಹಾಲನ್ನೇ ಕೊಡುತ್ತಿದ್ದಳು. ಕಾರಣವೋ, ತನ್ನ ಸೌಂದರ್ಯ ಕೆಡುವುದಂತೆ! ವಕ್ಷಸ್ಥಳದ ಉಬ್ಬಿಸ ಸೊಬಗು ಹೋಗುವುದಂತೆ! ರಗಳೆಯಾಗುವುದಂತೆ! ಹಾಲಿಸ ಪುಡಿಯಿಂದ ಶಕ್ತಿ ಬರುವುದೆಂದು ಜಾಹೀರಾತುಗಳಲ್ಲಿ ನೋಡಿದ್ದಳಂತೆ! ಮತ್ತು ಕೆಲವರು ತಮ್ಮ ಮಕ್ಕಳು ಪುಷ್ಟಿಯಾಗಬೇಕೆಂದು ಮೆಂತೆಯ ಹಿಟ್ಟೋ ರಾಗಿಯ ಹಿಟ್ಟೋ ಇನ್ನೂ ಏನೇನೋ ಮಗುವಿನ ಹೊಟ್ಟೆಯೆಂದರೆ ಗೋಣಿಯ ಚೀಲವೋ ಎಂಬಂತೆ ದಿಸಕ್ಕೆ 10 12 ಸಲವೂ ತುಂಬಿಸುತ್ತಿದ್ದರು. ಹಲ್ಲುಬಾರದ ಆ ಶಿಶುಗಳು ಆ ಆಹಾರವನ್ನು ಜೀರ್ಣಿಸಲಾರದೆ, ಗೂರಬು ಎದೆ, ಡೊಳ್ಳು ಹೊಟ್ಟೆ, ಚಾಟು ಅಂಡು, ಚೋಟು ಕೈ, ಮೋಟು ಕಾಲು, ಗೊರಬಣ್ಣ ಸಂತಿದ್ದುವು! ಶಿಶುಗಳು ಚಳಿಯಾಗಿ ಕೂಗಲಿ, ಸೆಖೆಯಾಗಿ ಕೂಗಲಿ, ಮಲಗಿಸಿದುದು ಸರಿಯಾಗದೆ ಕೂಗಲಿ, ಕತ್ತಲೆ ಕೋಣೆಯ ಕಾರಾಗೃಹವಾಸವನ್ನು ಸಹಿಸದೆ ಕೂಗಲಿ, ಏನಾದರೂ ದೇಹಪೀಡೆಯಿಂದ ಕೂಗಲಿ—ತಟ್ಟನೆ ಬಂತೇ ಬಂತು! ಪಾಪ, ಬಾಯಿ ಬಾರದ ಆ ಮಕ್ಕಳ ಬಾಯಿಗೊಂದು ಬಿರಡೆ! ಮೊಲೆಯೋ, ಹಾಲಿನ ಬುಡ್ಡಿಯೋ, ಅಥವಾ ಕುದಿಸಿ ತಣ್ಣಗಾಗಿ ಹೋಗಿದ್ದ ಹಿಟ್ಟಿನ ಮುದ್ದೆಯೊ! ಇದೊಂದೇ ದುರಭ್ಯಾಸದಿಂದ ಎಷ್ಟೋ ಮಕ್ಕಳು ತರತರದ ರೋಗಗಳಿಗೆ ತುತ್ತಾಗುತ್ತಿರುವರು! ಅವರೆಲ್ಲರಿಗೂ ಎದೆಹಾಲಿನ ಮಹತ್ವವನ್ನು ಹೀಗೆಂದು ಬೋಧಿಸಿದೆನು—

**ಪದ—(ಕೋವಿದ ಪರಿಚಯ . . . ಎಂಬಂತೆ) ದೀಪಚಂದಿ ತಾಳ.**

**ಶಿಶುಗಳಿಗತಿ ಹಿತವಾದುದು—ತಾಯಹಾಲಿಗೆ ಸರಿಯಾದುದಿಲ್ಲವು ॥ ಪ ॥**
**ಹೋರ್ಲಿಕನ್ನು, ಮೇಲಿನ್ನು, ಕಂಡೆನ್ಸ್ಡ್ ಮಿಲ್ಕೆಂದು ।**
**ನೀವೆಂದೂ ಮರುಳಾಗಬೇಡಿರಿ ॥ ೧ ॥**
**ಮಗುವಿದು ಸದ್ದನು ಮಾಡದೆ । ಬಹುಸೌಖ್ಯದಿ ಮಲಗಲಿ**
**ಯೆನ್ನುತ—ಹೊಟ್ಟೆಯೆಂಬುದು ಚೀಲವೆನ್ನುತ ತುಂಬಿಸಿ ।**
**ರೋಗಕ್ಕೆ ಸ್ಥಾನವ ನೀವಿರಿ ॥ ೨ ॥**

**ಆರೋಗ್ಯಪ್ರತಾಪ:**—ಸರಿ, ಬಹಳ ಶ್ಲಾಘನೀಯವಾದ ಕೆಲಸವನ್ನು ಮಾಡುತ್ತಿರುವಿರಿ. ಆರೋಗ್ಯಮಾತೆ, ನಿನ್ನ ದೃಷ್ಟಿಗೆ ಏನೆಲ್ಲ ದೋಷಗಳು ಕಂಡುಬಂದುವು?—

**ಆರೋಗ್ಯಮಾತೆ:**—ಪ್ರಭೋ! ಲಾಲಿಸೋಣಾಗಲಿ! ಒಬ್ಬಳು ತನ್ನ ಮಗುವನ್ನು ರೋಗಿಷ್ಟನ ಹಾಸಿಗೆಯಲ್ಲಿ ಬಿಟ್ಟಿದ್ದಳು; ಇನ್ನೊಂದು ಕಡೆ ಮೈ ಯೆಲ್ಲಾ ಕಜ್ಜಿಯಿದ್ದ ಹುಡುಗನೊಬ್ಬನು ಮಗುವನ್ನು ಎತ್ತಿಕೊಂಡಿದ್ದನು. ಒಂದು ಮನೆಯಲ್ಲಿ ಕ್ಷೇಮರೋಗದಿಂದ ತುಂಬಿರುವವಳೊಬ್ಬಳು ಮಗುವಿನ ಬಾಯಿಗೆ ಮುದ್ದಿಡುತ್ತಿದ್ದಳು. ಇನ್ನೊಂದು ಕಡೆಯಲ್ಲಿ ಮೈಯೆಲ್ಲಾ ಹುಣ್ಣಾಗಿದ್ದ ನಾಯಿಯ ಮರಿಯನ್ನು ಮಗುವು ತಬ್ಬಿಕೊಂಡು ಆಡುತ್ತಿತ್ತು. ಇಂತಹ ವಿಷಯಗಳ ಸಂಬಂಧದಿಂದ ಮಗುವಿನ ಎಳೆಯ ದೇಹದಲ್ಲಿ ಭಯಂಕರ ರೋಗಗಳು ಹೇಗೆ ಬಲವಾಗಿ ಬೇರೂರಿಕೊಳ್ಳುತ್ತವೆಂಬುದನ್ನು ಅವರಿಗೆ ಹೀಗೆಂದು ವಿವರಿಸಿದೆನು—

ಪದ—ಆದಿತಾಳ.

ಶಿಶುವಿಂಗೆ ರೋಗಗಳ್—ಬಹುಬೇಗ ಹಾರುವುವೌವ್ವಾ । ಬಹುಬೇಗ
ಹಾರುವುವೌವ್ವಾ । ಬಹುಬೇಗ ಹಾರುವುವೌವ್ವಾ ॥
ಶಿಶುಸಮೀಪದಿ ರೋಗೀ । ಬಾರದವತೆರದಿ ತಡಿರೇ । ಬಾರದ
ತೆರದಿ ತಡಿರೇ । ಬಾರದತೆರದಿ ತಡಿರೇ ॥ ಮುಟ್ಟಲು
ರೋಗಗಳ್ । ಬಹುಬೇಗ ಹಾರುವುವೌವ್ವಾ ॥ ೧ ॥

ಮತ್ತೊಂದು ಮನೆಯಲ್ಲಿ ದೂಳುತುಂಬಿದ್ದ ನೆಲದ ಮೇಲೆ ಮಗುವನ್ನು ಬಿಟ್ಟು ಎದುರಿನಲ್ಲಿ ತಾಂಬ್ರದ ಸೌಟು ತುಕ್ಕು ಹಿಡಿದ ಬೀಗದ ಕೈಗೊಂಚಲು ಇನ್ನೂ ಏನೇನೋ ಕೊಳಕು ಹಿಡಿದ ಆಟದ ಸಾಮಾನುಗಳನ್ನು ಚೆಲ್ಲಿದ್ದರು—ಮಗುವು ಮೂತ್ರವನ್ನು ಮಾಡಿ, ಆ ಕೆಸರಲ್ಲಿ ಅವುಗಳನ್ನು ಕಲಸಿ ಬಾಯಿಗೆ ಇಟ್ಟು ಕೊಳ್ಳುತ್ತಿತ್ತು. ನಾನು ಆ ಮಗುವಿನ ತಾಯಿಯನ್ನು ಕರೆದು 'ಅಮ್ಮಾ, ನೀವೂ ಇವನ್ನು ಬಾಯಿಗೆ ಇಟ್ಟುಕೊಳ್ಳುವಿರಾ?' ಎಂದೆ. ಆಗ ಆ ತಾಯಿಯ ಕಣ್ಣು ತೆರೆಯಿತು ಅಂತಹ ಕಾರ್ಯಕ್ಕೆ ಇನ್ನೆಂದಿಗೂ ಎಡೆ ಗೊಡುವುದಿಲ್ಲವೆಂದು ಪ್ರತಿಜ್ಞೆ ಮಾಡಿದಳು. ಹೀಗೆಯೇ ಅನೇಕ ವಿಷಯ ಗಳನ್ನು ಬೋಧಿಸುತ್ತಿದ್ದೇವೆ, ಮಹಾಪ್ರಭೋ!

**ಆರೋಗ್ಯಪ್ರತಾಪ:**—ಶಿಶುಗಳ ಆರೋಗ್ಯದ ವಿಷಯ ವಿಶೇಷ ಪ್ರಯತ್ನವು ನಿಮ್ಮಿಂದ ನಡೆಯುತ್ತಿದೆಯೆಂಬುದನ್ನು ನೋಡಿ ನಾನು ತುಂಬ ಸಂತೋಷಪಡುತ್ತೇನೆ. ಆರೋಗ್ಯ ಸಂಜೀವಿನಿ, ಸ್ತ್ರೀಯರ ವಿಷಯವೇನು?

**ಆರೋಗ್ಯ ಸಂಜೀವಿನಿ:**—ಪ್ರಭೋ! ಯೌವನಾವಸ್ಥೆಗೆ ಕಾಲಿಡುವ ಮೊದಲೇ ವೃದ್ಧಾಪ್ಯವನ್ನು ಹೊಂದಿದ ಹಲವು ಸ್ತ್ರೀಯರನ್ನು ಸಂದರ್ಶಿಸಿದೆವು. ತಾನೇ ಮಗು, ಅವಳಿಗೊಂದು ಮಗು! ಮದುವೆಯಾದ ಮರು ದಿನವೇ ಋತುಮತಿಯೆಂದೆನಿಸಿ ಗಂಡನೊಡನೆ ಮದ್ರಾಸಿಗೋ ಬೊಂಬಾಯಿಗೋ ಹೋಗಿ ಬೊಂಬೆಯಂತೆ ಕುಳಿತು ವರುಷದೊಳಗೆ ಮಗುವೊಂದನ್ನು ಹೆತ್ತು 13 ವಯಸ್ಸಿನಲ್ಲಿಯೇ ಮುದುಕಿಯಾದವರು ಅವರಲ್ಲಿ ಅನೇಕರು— ಮತ್ತೂ ಒಂದೆರಡು ವರುಷ ಬದುಕಿ ಇನ್ನೂ ಒಂದೆರಡು ರೋಗಿಗಳ ಅವತಾರಕ್ಕೆ ಪುಣ್ಯಕ್ಷೇತ್ರವೆನಿಸಿಕೊಂಡು ಸನ್ನಿಪಾತ ಜ್ವರದಿಂದ ಹೇಗೋ ಮೇಲೆ ಬಿದ್ದು ಕ್ಷಯರಾಜನ ದವಡೆಯೊಳಗೆ ಪ್ರವೇಶಿಸುತ್ತಿರುವವರು ಇನ್ನೂ ಕೆಲವರು—

ಪದ—(ಬೀರುವರು ಇವರು . . . ಎಂಬಂತೆ) ಪಂಜಾಬಿ ತಾಳ.

**ಸೇರುವರೂಯಿವರು—ಕ್ಷಯರಾಜನ—ದವಡೆಯೊಳು— ॥ ಪ ॥**<br>
**ಬಲಿಯದ ತನುವ । ರತಿಸುಖ ಕಿಳಿಸಿ ।**<br>
**ತನುವಿನ ದಾರ್ಢ್ಯತೆಗೆ । ವಿಷವಾಗುವ । ತೆರನಡೆದು ॥ ೧ ॥**

**ಆರೋಗ್ಯಪ್ರಚಾರಿಣಿ:**—ಅವೆಲ್ಲವೂ ಮದ್ರಾಸು ಬೊಂಬೈಯ ಬೊಂಬೆಗಳ ವಿಷಯ. ನಮ್ಮ ಈ ಊರ ಗೊಂಬೆಗಳ ಕುರಿತು ನಾನು ಕಂಡುದನ್ನು ಬಿನ್ನವಿಸುವೆನು. ಲಾಲಿಸೋಣಾಗಲಿ—ಒಂದಿಷ್ಟು ಮೈಯಲ್ಲಾಡಿಸಿ ಕೆಲಸ ಮಾಡಿದರೆ ತಮ್ಮ ಮೇಣದ ಮೈಯೆಲ್ಲಾದರೂ ಕರಗಿ ಹೋಗುವುದೆಂಬ ಭಯದಿಂದಲೋ, ತಮ್ಮ ಸೌಂದರ್ಯದ ಕಾಂತಿ ಕುಂದುವುದೆಂದೋ, ಇಲ್ಲವೇ ಮನೆಗೆಲಸ ಮಾಡುವುದು ಗೌರವಕ್ಕೆ ಕಡಿಮೆಯೆಂಬ ದುರ್ಭಾವನೆಯಿಂದಲೋ, ಊಟಮಾಡಿದ ಬಟ್ಟಲಲ್ಲೇ ಕೈತೊಳೆಯಿಸಿಕೊಂಡು ತಮ್ಮ ಶೃಂಗಾರದಲ್ಲೇ ಕಾಲಕಳೆಯುತ್ತ ಅಕಾಲಮೃತ್ಯುವಿಗೆ ತುತ್ತಾಗುವವರು ಕೆಲವರು—ಡಬ್ಬಿಡಬ್ಬಿಗಳಲ್ಲಿ ತಿಂಡಿಗಳನ್ನು ಮಾಡಿಸಿಟ್ಟುಕೊಂಡು ಬಾಯಿಯೆಂಬುದು ಬೀಸುವ ಕಲ್ಲೋ ಎಂಬಂತೆ ಯಾವಾಗಲೂ ಮೆಲುಕು ಹಾಕುತ್ತಿರುವವರು ಹಲವರು. ಬೀದಿಗಿಳಿಯಬೇಕಾದರೆ ಮೋಟರ್‌ಕಾರ್ ಇಲ್ಲವೇ ಕುದುರೆಬಂಡಿ ಬರಬೇಕೆನ್ನುವವರು ಅನೇಕರು. ಆದರೆ ಇಂತಹ ಸುಖಜೀವಿಗಳ ಸಂಕಷ್ಟಗಳನ್ನು ಕೇಳಲಿಕ್ಕೆ ಮಾತ್ರ ನೂರು

ಕಿವಿಗಳಿದ್ದರೂ ಸಾಲದು! ಒಬ್ಬಳಿಗೆ ತಲೆಸಿಡಿತ, ಇನ್ನೊಬ್ಬಳಿಗೆ ಮಲಬದ್ಧತೆ, ಮತ್ತೊಬ್ಬಳಿಗೆ ಬೆನ್ನು ನೋವು, ಮಗದೊಬ್ಬಳಿಗೆ ಕೈಕಾಲು ಬತ್ತಿಬರುವುದು; ಒಂದು ಗೊಂಬೆಗೆ ಸಾಯಂಕಾಲ ಸ್ವಲ್ಪ ಜ್ವರ, ಕೆಮ್ಮು, ಮತ್ತೊಂದು ಮೇಣದ ಮೂರ್ತಿಗೆ ಗರ್ಭಿಣಿಯಾದಷ್ಟು ಸಲವೂ ಗರ್ಭಸ್ರಾವ! ಇನ್ನೊಂದು ಮಿಣ್ಣಾಮಿಣ್ಕಿಗೆ ತಿಂದುದು ಜೀರ್ಣವೇ ಆಗುವುದಿಲ್ಲವಂತೆ! ಹೇಳಿದೆನಲ್ಲ, ಮಹಾಸ್ವಾಮಿನಾ, ಅವುಗಳನ್ನೆಲ್ಲಾ ಕೇಳಲು ನೂರು ಕಿವಿಗಳೂ ಸಾಲವು; ವಯಸ್ಸಿನಲ್ಲಿ ಸುಕುಮಾರಿ, ನೋಟಕ್ಕೆ ವೃದ್ಧಾಂಗಿ!

**ಪದ—ರಾಗ-ಭೂಪಾಳಿ—ಝಂಪೆತಾಳ.**

**ವೃದ್ಧಾಂಗಿ ಸುಕುಮಾರಿ! । ಸುಖಪೋರಿ ವೈಯ್ಯಾರಿ ॥ ಪ ॥**
**ಭೋಗಿ ಅನುದಿನ ರೋಗಿ । ವ್ಯಾಯಾಮ ನೀಗಿ ॥ ೧ ॥**
**ನೋವಸಹಿಸದ ಜೀವ । ಬಹುಬೇಗ ಸಾವ ॥ ೨ ॥**

ಶಿಶುಸಂರಕ್ಷಿಣಿ:—ಆದರೆ ಇವರೆಲ್ಲರೂ ಕೇವಲ ಹೆಡ್ಡರೆನ್ನಲೂ ಆಗುವುದಿಲ್ಲ. ಒಂದು ರೀತಿಯಲ್ಲಿ ಯೋಚಿಸಿದರೆ ಪ್ರತಿಯೊಬ್ಬಳನ್ನೂ 'ಲೇಡಿ ಡಾಕ್ಟರ್' ಎಂದೇ ಹೇಳಬೇಕು. ಅವರ ಶಯನಾಗಾರದ ಒಂದು ಕವಾಟು ಔಷಧದ ಸೀಸೆಗಳಿಂದ ತುಂಬಿಹೋಗಿರುವುದು! ವೃತ್ತಪತ್ರಿಕೆಗಳ ಜಾಹೀರಾತಿನಿಂದ ಪ್ರಸಿದ್ಧಹೊಂದಿದ 'ಪೇಟೆಂಟ್' ಔಷಧಗಳೆಲ್ಲವೂ ಅಲ್ಲಿವೆ! Pain balm, headache cure, caugh tablets, electric pills, kidney pills, nerve tonic, lung tonic, asthma pills, ಹೀಗೆ ಏನುಂಟು ಏನಿಲ್ಲ ಎಂದು ಹೇಳಲು ಅಸಾಧ್ಯ ಸ್ವಾಮಿನಾ, ನಾವು ಅವುಗಳ ನಿಷ್ಪ್ರಯೋಜಕತೆಯನ್ನು ಹಲವು ಬಗೆಗಳಿಂದ ತೋರಿಸಿಕೊಟ್ಟು— 'ಅಮ್ಮಾ, ದೇಹಾರೋಗ್ಯಕ್ಕೆ ದೇವರು ನಿಯಮಿಸಿರುವ ಮಾರ್ಗವನ್ನು ದಯಮಾಡಿ ಅನುಸರಿಸಿರಿ; ಪ್ರತಿದಿನವೂ ಒಂದಿಷ್ಟು ಮನೆಗೆಲಸ ಮಾಡಿರಿ, ಮೈಯೊಂದಿಷ್ಟು ಬೆವರಲಿ, ಅದರಿಂದ ಗೌರವಕ್ಕೆ ಹಾನಿಯಿಲ್ಲ; ನಿಮಗೆ ಕೈಗೊಂದು ಕಾಲಿಗೊಂದು ಜನವಿದ್ದರೂ ವಿನೋದಕ್ಕಾಗಿಯಾದರೂ ಒಂದಿಷ್ಟು ಕೆಲಸಮಾಡಿರಿ. ಅದರಲ್ಲಿ ಇಷ್ಟವಿಲ್ಲವೆಂತಾದರೆ ಒಂದು ಸಣ್ಣ ಹೂದೋಟವನ್ನು ಮಾಡಿ ಅದರಲ್ಲಿ ದಿನಕ್ಕೊಂದೆರಡುಗಳಿಗೆ ಕೆಲಸ ಮಾಡಿರಿ;

ನಿಮ್ಮ ಅಕ್ಕರೆಯ ಹೂವಿನ ಗಿಡಬಳ್ಳಿಗಳಿಗೆ ನೀರುಸೇದಿ ಹಾಕಿರಿ' ಎಂದು ಪದೇಪದೇ ಉಪದೇಶಿಸುತ್ತ ಬರುತ್ತಿರುವೆವು.

**ಶಿಶುಸಂಜೀವಿನಿ:**—ಆದಕ್ಕೂ ಕೆಲವರು ಹೀಗೆಂದು ಆಕ್ಷೇಪಿಸಿದರು—'ಯೂರೋಪಿಯ ಸ್ತ್ರೀಯರು ಮನೆಗೆಲಸ ಮಾಡುತ್ತಾರೆಯೆ? ಅವರೆಷ್ಟು ಆರೋಗ್ಯವಂತೆಯರಾಗಿಲ್ಲ! ಅವರಂತೆ ನಾವೂ ಐಶ್ವರ್ಯವಂತರು; ನಾವೇಕೆ ಮನೆಗೆಲಸಕ್ಕೆ ಕೈಹಚ್ಚಬೇಕು?' ಎಂದು ತರ್ಕಿಸಿದರು.

**ಪದ--(ಶರಣಕರುಣ ಮಾತೆ . . . ಎಂಬಂತೆ) ರೂಪಕತಾಳ.**

**ತನುವದಣಿಸಲೇಕೆ । ಶ್ರಮವೇಕೆ ॥ ಪ ॥**
**ಯುರೋಪಿಯರಾ ನೋಡಿದಿರಾ । ಮಾಡರಾವ ಕೆಲಸವನ್ನು । ನಾವೇಕೆ ॥ ಅ ಪ ॥**
**ಸೌಖ್ಯರಾಶಿ ಧನದರಾಶಿ--ಸುಖಿಪೆವು—ನಂಬಿಹೆವು--ಮನಗಂಡಿಹೆವು ॥**
**ವಸನ ಭೂಷಣ—ಧನದರಾಶಿ—ಜಗದ—ಸುಖದ—ನಿಲಯ ॥**
**ಬರಿದೇಕೆ ಕೆಲಸ—ಅಸಹ್ಯ—ದುಡುವೇಕೆ—ಶ್ರಮವೇಕೆ? ॥ ೧ ॥**

ಆದಕ್ಕೂ ಈ ರೀತಿ ಸಮಾಧಾನಗೊಟ್ಟೆವು—'ಯುರೋಪಿಯ ಸ್ತ್ರೀಯರು ಅಂಗಸಾಧನೆಗಾಗಿ ಮನೆಗೆಲಸ ಮಾಡುವುದಿಲ್ಲವೆಂಬುದೇನೋ ನಿಜ. ಆದರೆ ಅದರ ಬದಲಾಗಿ ಕುದುರೆಸವಾರಿ, ತರತರದ ಚಂಡಾಟ, ದಿನಾಲೂ ವಾಯುಸೇವನೆಗೆಂದು ಒಂದೆರಡು ಮೈಲು ತಿರುಗಾಟ, ಅಲ್ಲದೆ ಆಗಾಗ 'Ball, Dance' ಎಂಬ ವಿಶೇಷವಾದ ನರ್ತನ, ಇವೆಲ್ಲವನ್ನೂ ಮಾಡುತ್ತಾರೆ. ನಮಗಾದರೋ ಅದು ಬೇಡ, ಇದು ಊಂ ಹುಂ ಎಂದು ತ್ರಿಶಂಕು ಸ್ವರ್ಗವಾಗಿದೆ' ಎಂದ ಮೇಲೆ ನಮ್ಮ ಮಾತಿನಲ್ಲಿ ಅವರಿಗೆ ವಿಶ್ವಾಸ ಹುಟ್ಟಿತು. ಹೀಗೆಯೇ ಅನೇಕ ರೀತಿಯಲ್ಲಿ ಪ್ರಚಾರಕಾರ್ಯವನ್ನು ಮಾಡುತ್ತಿರುವುದರಿಂದ ಇತ್ತೀಚೆಗೆ ಸ್ತ್ರೀಯರ ಅಜ್ಞಾನವು ಮಾಯವಾಗತೊಡಗಿದೆ. ಶಿಶುಗಳ ಮರಣವು ಕಡಿಮೆಯಾಗಹತ್ತಿದೆ. ಮನೆಮನೆಗಳಲ್ಲಿ ರೋಗರುಜೆಗಳು ತಲೆದೋರುವುದು ಅಪರೂಪವಾಗುತ್ತಲಿದೆ. ನಾವು ಪ್ರಚಾರಪಡಿಸಿರುವ ಈ ಆರೋಗ್ಯಗೀತೆಯು ಪ್ರತಿಯೊಂದು ಮನೆಯಲ್ಲಿಯೂ ಕೇಳಬರುತ್ತಿದೆ—

ಪದ—(ಸದಾ ಶ್ರೀಹರಿಚೆನಾಮ . . . ಎಂಬಂತೆ) ರೂಪಕತಾಳ.

ಸದಾನಿರ್ಮಲತೆ ತೋರಿ—ಸುಖಕೇಕದಾರೀ ॥
ಶುದ್ಧವಾರಿ ಶುದ್ಧವಾರಿ—ಸುಖಕೆ ದಾರೀ—ಸದಾ ॥
ನಿದ್ರಾಸ್ಸುಖ ವಿಮಲವಾಯು । ಚಲನೆದೇಹ ಸುಖಕೆ ದಾರೀ—
ಮಿತಾಹಾರವು—ನಿತ್ಯಗೆಲಸ—ಸುಖಕೆ ದಾರೀ ಸದಾ ॥

**ಆರೋಗ್ಯಪ್ರತಾಪ:**—ಆರೋಗ್ಯಮಾತೆ, ಆರೋಗ್ಯಸುಂದರಿ, ಆರೋಗ್ಯ ಸಂಜೀವಿನಿ, ಶಿಶು ಸಂರಕ್ಷಿಣಿ, ಶಿಶು ಸಂಜೀವಿನಿ ನೀವೂ ನಿಮ್ಮ ಸ್ತ್ರೀದಳವೂ ಶ್ರದ್ಧೆಯಿಂದ ಆರೋಗ್ಯಪ್ರಚಾರ ಕಾರ್ಯವನ್ನು ನಿರ್ವಹಿಸುತ್ತಿರುವುದು ತುಂಬ ಶ್ಲಾಘನೀಯವಾಗಿದೆ. ನಿಮ್ಮ ಈ ಬೋಧನೆಯನ್ನು ಪ್ರತಿಯೊಂದು ಮನೆಯಲ್ಲಿಯೂ, ಪ್ರತಿಯೊಂದು ಬಾಲಿಕಾ ಪಾಠಶಾಲೆಗಳಲ್ಲಿಯೂ ಸಾರುತ್ತಲಿರಿ; ಇಂತಹ ವಿಷಯಗಳನ್ನೆಲ್ಲ ಸ್ತ್ರೀಯರೂ ಬಾಲಿಕೆಯರೂ ಸಂತೋಷದಿಂದ ಸುರಸವಾಗಿ ಹಾಡುತ್ತ ಆರೋಗ್ಯಜೀವನದ ಸೂತ್ರಗಳನ್ನು ಸದಾ ನೆನಪಿನಲ್ಲಿಟ್ಟುಕೊಂಡಿರುವಂತೆ ಹಾಡುಗಳನ್ನು ಕಟ್ಟಿಸಿ ಸಾವಿರಗಟ್ಟಳೆಯಲ್ಲಿ ಛಾಪಿಸಿ ನಿಮ್ಮ ವಶ ಕೊಡುವೆನು. ಅವುಗಳು ಪ್ರತಿಯೊಂದು ಸ್ತ್ರೀಯ ಕೈಗೂ ಸಿಕ್ಕಿ ಜೋಗುಳಪದವಾಗಿ ಪರಿಣಮಿಸಲಿ, ಅಂತಹ ಜೋಗುಳವನ್ನು ಕೇಳುತ್ತ ಬೆಳೆದ ಮಕ್ಕಳಿಂದಲೇ ಮುಂದೆ ನಮ್ಮ ಆರೋಗ್ಯ ದಿಗ್ವಿಜಯವಾಗಬೇಕು. ಇರಲಿ, ಇನ್ನು ರೋಗಾಂತಕ, ಆರೋಗ್ಯ ಪ್ರಚಾರಕ, ಆರೋಗ್ಯಪಾಲಕರೇ ಮೊದಲಾದವರು ಎಷ್ಟರ ಮಟ್ಟಿಗೆ ತಮ್ಮ ಕಾರ್ಯದಲ್ಲಿ ವಿಜಯಿಗಳಾಗಿರುವರೆಂಬುದನ್ನು ತಿಳಿಯೋಣ!

**ಆರೋಗ್ಯಪ್ರಚಾರಕ:**—ಸ್ವಾಮಿಾ, ಹಳ್ಳಿ ಹಳ್ಳಿಗಳಲ್ಲಿ, ಪಟ್ಟಣ ಪಟ್ಟಣಗಳಲ್ಲಿ, ಬೀದಿ ಬೀದಿಗಳಲ್ಲಿ, ಶಾಲೆಗಳಲ್ಲಿ, ಕಾರ್ಖಾನೆಗಳಲ್ಲಿ, ಗಲ್ಲಿಗಳಲ್ಲಿ—ಉತ್ಸವ ಜಾತ್ರೆಗಳಲ್ಲಿ—ಎಲ್ಲೆಲ್ಲಿಯೂ ಆರೋಗ್ಯಜೀವನ ಕ್ರಮವನ್ನು ವಿವಿಧ ರೀತಿಯಲ್ಲಿ ಜನತೆಗೆ ಬೋಧಿಸುತ್ತ ಬಂದಿರುವೆವು. ಹಳ್ಳಿಹಳ್ಳಿಗಳನ್ನೇ ಹಾಳುಗೆಡಹುವ ಅಂಟುರೋಗಗಳು ತಲೆಯೆತ್ತದಂತಾಗಿವೆ. ಜನತೆಗೆ ನಿರ್ಮಲವಾದ ಸರಳ ಜೀವನದಲ್ಲಿ ಪ್ರೇಮವೂ ಸೊಗಸಿನ ಕೃತಕ ಜೀವನಕ್ರಮದಲ್ಲಿ ವೈರಾಗ್ಯವೂ ಅನಾರೋಗ್ಯಕಾರಕವಾದ ಜೀವನದಲ್ಲಿ

ದ್ವೇಷವೂ ಹುಟ್ಟಿವೆ. ವ್ಯಭಿಚಾರ ಸುರಾಪಾನ ಮುಂತಾದ ದುರಭ್ಯಾಸಗಳ ಭೀಕರ ಚಿತ್ರವನ್ನು ನಾಟಕಗಳ ಮೂಲಕ, ಮಾಯಾಲಾಂದ್ರಗಳ ಮೂಲಕ, ಪ್ರದರ್ಶಿಸಿ ಅಂತಹವುಗಳಿಂದ ಜನರು ವಿಮುಖರಾಗುವಂತೆ ಮಾಡಿರುವೆವು. ಶಾಲೆಗಳಲ್ಲಿ ಬ್ರಹ್ಮಚರ್ಯದ ಮಹತ್ವ, ದೇಹಶಾಸ್ತ್ರ, ಆರೋಗ್ಯಶಾಸ್ತ್ರ ಮುಂತಾದ ವಿಷಯಗಳನ್ನು ಪರೀಕ್ಷಾ ಪಾಠಗಳಾಗಿ ಇರಗೊಡಿಸಿರುವುದರಿಂದ ಪ್ರತಿಯೊಬ್ಬ ಯುವಕನೂ ಶಾಲೆಗಳಲ್ಲಿ ಅವುಗಳನ್ನು ತಿಳಿಯಲೇ ಬೇಕಾಗಿದೆ. ದೇಹಶಕ್ತಿಯನ್ನು ಊರ್ಜಿತಗೊಳಿಸುವುದಕ್ಕಾಗಿ ಅಲ್ಲಲ್ಲಿ ವ್ಯಾಯಾಮ ಮಂದಿರಗಳು ತೆರೆಯಲ್ಪಟ್ಟಿವೆ. ನಮ್ಮ ಕಾರ್ಯಕ್ಕೆ ಜನತೆಯ ಸಹಕಾರ ಸಹಾನುಭೂತಿಯೂ ದಿನೇದಿನೇ ಹೆಚ್ಚು ಹೆಚ್ಚಾಗಿ ದೊರೆಯುತೊಡಗಿವೆ. ಪರಿಪೂರ್ಣವಾಗಿ ಆರೋಗ್ಯ ದಿಗ್ವಿಜಯವಾಗಬೇಕೆಂಬ ಧ್ಯೇಯದಿಂದ ನಾವೂ ನಮ್ಮ ದಳಗಳೂ ಅವಿಶ್ರಾಂತವಾಗಿ ಕೆಲಸ ಮಾಡುತ್ತಿರುವೆವು. ಈ ವಿಷಯಗಳನ್ನೆಲ್ಲ ಸವಿಸ್ತಾರವಾಗಿ ಆಗಾಗ ನಮ್ಮ ದಳದವರು ಸನ್ನಿಧಾನಕ್ಕೆ ವರದಿಯ ರೂಪದಲ್ಲಿ ಶೃತಪಡಿಸಿರುವರು. ತಾವೂ ನಮ್ಮ ಕಾರ್ಯಕ್ಷೇತ್ರಗಳನ್ನು ಸಂದರ್ಶಿಸಿದಾಗಲೆಲ್ಲ ಆರೋಗ್ಯ ದಿಗ್ವಿಜಯದ ಕಾರ್ಯವು ಸ್ಥಿರವಾದ ಹೆಜ್ಜೆಗಳನ್ನಿಡುತ್ತ ಮುಂದುವರಿಯುತ್ತಿರುವದೆಂಬ ಸಂಗತಿ ದಿವ್ಯಚಿತ್ತಕ್ಕೆ ವೇದ್ಯವಾಗಿರಬಹುದು, ಮಹಾಸ್ವಾಮಿ.

**ಆರೋಗ್ಯಪ್ರತಾಪ:**—ಸರಿ, ಈ ವಿಷಯಗಳೆಲ್ಲ ನನಗೆ ತಿಳಿದೇ ಇದೆ. ಇವುಗಳನ್ನು ತಿಳಿದುಕೊಳ್ಳುವುದಕ್ಕಾಗಿ ಮಾತ್ರ ಈ ಸಭೆಯನ್ನು ಕೂಡಿಸಿದುದಲ್ಲ. ಇನ್ನು ಮುಂದಿನ ಕಾರ್ಯಕ್ರಮವನ್ನು ನಾವೆಲ್ಲರೊಂದಾಗಿ ನಿಶ್ಚಯಿಸಬೇಕಾಗಿದೆ. ಆದಕ್ಕಾಗಿ ನಿಮ್ಮೆಲ್ಲರನ್ನು ಕರೆತರಿಸಿದೆನು. ಆ ವಿಷಯವನ್ನು ಸಾವಧಾನವಾಗಿ ನಾಳೆ ತರ್ಕಿಸಿ ಇತ್ಯರ್ಥಿಸೋಣ. (ಎಂದು ಏಳುವನು.)

ಎಲ್ಲರೂ ಎದ್ದು:—ಆರೋಗ್ಯಪ್ರತಾಪಕೀ ಜೈ! (ಎಂದು ಮೂರು ಮೂರು ಸಲ ಕೂಗುವರು )

(ಪರದೆಯು ಬೀಳುವುದು.)

---

## ದೃಶ್ಯ ೨.—ಯಮಧರ್ಮರಾಜನ ದರ್ಬಾರ್.

(ಪ್ಲೇಗು, ಕೋಲೆರಾ, ಸಿಡುಬು, ಜ್ವರ ಮುಂತಾದ ಸೇನಾನಾಯಕರು ಕುಳಿತಿರುವರು. ಯಮಧರ್ಮರಾಯನು ಪ್ರವೇಶಿಸುವನು. ಎಲ್ಲರೂ ಎದ್ದು ನಿಲ್ಲುವರು. 'ಯಮಧರ್ಮರಾಜಕೀ ಜೈ' ಎಂದು ಆತನನ್ನು ಪ್ರಾರ್ಥಿಸುವರು.)

**ಪದ—ದಾದರ ತಾಳ.**

**ರೋಗಜನಕಾ—ಲಯಕೆಸಖಾ—ಧರ್ಮಪಾಲಕ ||**
**ಧರ್ಮಪಾಲ, ಧರ್ಮಪಾಲ, ಧರ್ಮಪಾಲಕಾ ||**
**ಜೈಜಯ ಧರ್ಮಪಾಲಕ—ಜೈಜಯ ಧರ್ಮಪಾಲಕ |**
**ಸದಾ—ಧರ್ಮಪಾಲಕ || ೧ ||**

ಯಮಧರ್ಮರಾಯ:— ಅಮಾತ್ಯರೆ, ಇದೇನು? ಭೂಲೋಕದ ಮಾನವ ಸಂಹಾರ ಕಾರ್ಯಕ್ಕೆ ನಿಮ್ಮನ್ನು ನಿಯಮಿಸಿರುತ್ತ, ಅದನ್ನು ನೀವು ಬಿಟ್ಟು ದಳಸಹಿತರಾಗಿ ಹಿಂದಿರುಗಿ ಬಂದುದರ ಕಾರಣವೇನು? ಇತ್ತೀಚೆಗೆ ನನ್ನ ಈ ಕೈಮುನಿ ಪುರಕ್ಕೆ ಭೂಲೋಕದಿಂದ ಅದರಲ್ಲೂ ಭರತಭೂಮಿಯಿಂದ ಜನರು ಬರುವುದು ದಿನೇದಿನೇ ಕಡಿಮೆಯಾಗುತ್ತಿರುವುದೇಕೆ? ನಿಮ್ಮ ಉತ್ಸಾಹವೆಲ್ಲ ಕುಂದಿಹೋಯಿತೆ? ಯಾರಾದರೂ ನಿಮ್ಮ ಕಾರ್ಯಕ್ಕೆ ಭಂಗವನ್ನುಂಟುಮಾಡುತ್ತಿರುವರೆ? ಅವನತಮುಖರಾಗಿರುವಿರೇಕೆ? ಹೇಳಿರಿ.

**ಪದ—ರಾಗ-ಮಧ್ಯಮಾವತಿ—ಆದಿತಾಳ.**

**ನುಡಿಯಿರೇ ತಡಮಾಡದೆ | ಇಳೆಯೊಳ್ ಹಾವಳಿಗೈವಿರೇ ಭಾರಿ ||**
**ಅಕಾಲಮೃತ್ಯುವ ವಿಶೇಷದೆ—ಸಂಹಾರ ಕಾರ್ಯದೊಳು**
**ತ್ವರಿಹದೆ—ಬಿಡುವುತ—ಹರಡುತ—ವಿಶಾಲದೆ || ೧ ||**

ಸರ್ವಸೇನಾಪತಿ:—ಮಹಾರಾಜ, ನಾವೆಂದಾದರೂ ಉತ್ಸಾಹರಹಿತರಾದುದುಂಟೆ? ಆದರೆ ಮಾಡುವುದೇನು? ಭೂಲೋಕದಲ್ಲಿ ಆರೋಗ್ಯಪ್ರತಾಪನೆಂಬವನೊಬ್ಬನು ತಲೆಯೆತ್ತಿರುವನು. ಆತನ ಆರೋಗ್ಯ ಪ್ರಚಾರ ಮಂಡಳಿಯ ಶಾಖೆಯು ಎಲ್ಲೆಲ್ಲಿಯೂ ಹಬ್ಬಿರುವುದು. ಜನರು ನಮ್ಮ ಬಲೆಗೆ ಬೀಳದಂತೆ ಅವರಿಗೆಲ್ಲ ಆ ಮಂಡಳಿಯವರು ಆರೋಗ್ಯವಿಜ್ಞಾನವನ್ನು ಬೋಧಿಸುತ್ತಿರುವರು. ಅಷ್ಟುಮಾತ್ರವೆ? ನಮ್ಮ ದಳಗಳನ್ನು ನಾಶಮಾ

ಡುವ ಉಪಾಯಗಳನ್ನು ಸಹ ಕಲಿಸಿಕೊಟ್ಟಿರುವರು. ಹೀಗಾಗಿ ನಮ್ಮ ದಳವೇ ಅಲ್ಲಿ ಬದುಕುವುದು ಕಷ್ಟವಾಗಿದೆ. ಈ ವಿಷಯವನ್ನು ಸನ್ನಿಧಾನ ದಲ್ಲಿ ಅರಿಕೆಮಾಡಿಕೊಳ್ಳೋಣವೆಂದು ನಾವೆಲ್ಲ ಬಂದಿರುವೆವು, ಮಹಾರಾಜ.

ಯಮಧರ್ಮರಾಜ:—ಪರಮಾಶ್ಚರ್ಯ! ಪರಮಾಶ್ಚರ್ಯ!

ಪದ—(ಲಲಸಾಮುನಾ . . . ಎಂಬಂತೆ) ಆದಿತಾಳ.

ಜಗದಾಜನಾ । ಅಜಾಗರುಕರೆಂದು ।
ತಿಳಿದು ನಾ ಸೂಕ್ಷ್ಮದಾ— ।
ಕೃತಿಯ ಸೇನೆ—ರಚಿಸಿ ವಿಫಲಾ ।
ವೆನಲು ಮುಹದಾ—ಶ್ಚರ್ಯವೈಸೇ ನುಡಿಯು ॥ ೧ ॥

ನಮ್ಮ ದಳವೆಂದರೆ ಸಾಮಾನ್ಯವೆ? ಮಾನವದೃಷ್ಟಿಗೆ ಅಗೋಚರವಾದುದು; ಅವರ ಕತ್ತಿ, ಕೋವಿ, ಫಿರಂಗಿ, ಬೊಂಬು ಇವುಗಳ ಬಾಯಿಗೆ ಸಿಗಲಾರದು. ಆದರೆ ಸೃಷ್ಟಿನಾಶಕಾರ್ಯದಲ್ಲಿ ಮಾತ್ರ ಅವುಗಳಿಗಿಂತ ಸಾವಿರಪಾಲು ಮಿಗಿಲಾದುದು. ಮಾನವದೇಹವೆಂಬ ಕೋಟೆಯನ್ನು ಲಗ್ಗೆಹತ್ತಿ ವಶ ಪಡಿಸಿಕೊಳ್ಳುವುದಕ್ಕಾಗಿ ಅಸಮಾನಶಕ್ತಿಯುಳ್ಳ ಅಣುಗಾತ್ರವಾದ ಅನೇ ಕಾನೇಕ ಜಾತಿಯ ದಳಗಳನ್ನು ನಾನು ನಿರ್ಮಿಸಿಲ್ಲವೆ? ಪ್ಲೇಗುಸೇನೆ, ಕೊಲೆರಾಸೇನೆ, ಕ್ಷಯಸೇನೆ, ಸನ್ನಿಪಾತದಳ—ನಿಮೋನಿಯಾದಳ, ಸಿಡುಬು ದಳ—ಮಕ್ಕಳ ರೋಗ, ಬಾಣಂತಿ ರೋಗ, ಪ್ರೇಮ ರೋಗ—ಇವೇನು ಸಾಮಾನ್ಯ ದಳಗಳೆ? ಎಲ್ಲಿ ನಿರ್ಮಲ ವಾಯು ಸಂಚಾರವಿಲ್ಲವೋ, ಎಲ್ಲಿ ನೀರು ಅಶುದ್ಧವಾಗಿದೆಯೋ, ಎಲ್ಲಿ ಸೂರ್ಯನ ಬೆಳಕು ಬೀಳುವುದಿಲ್ಲವೋ, ಎಲ್ಲಿ ಶುಚಿಯಿಲ್ಲವೋ ಅಲ್ಲಿ ಈ ದಳಗಳ ಕೆಲವೇಕೆಲವು ಅಣುಗಳನ್ನು ಮಾತ್ರ ಇಳಿಯುಬಿಟ್ಟರೆ ನಿಮ್ಮ ಕೆಲಸವು ತೀರಿತು. ಅವು ತಮ್ಮಷ್ಟಕ್ಕೆ ಕ್ಷಣಕ್ಷಣ ದಲ್ಲಿ ಅಭಿವೃದ್ಧಿ ಹೊಂದಿ, ಹತ್ತುನೂರಾಗಿ ನೂರುಲಕ್ಷವಾಗಿ ಲಕ್ಷಲಕ್ಷೋ ಪಲಕ್ಷವಾಗಿ ಊರುಊರುಗಳನ್ನೇ ಪಾಳುಗೆಡಹುವುದಿಲ್ಲವೆ? ಇಂತಹ ಅಗೋಚರವೂ, ಅದ್ಭುತ ಶಕ್ತಿಯುತವೂ ಆದ ದಳಗಳನ್ನು ಅಸಹಾಯ ಶೂರರಾದ ನಿಮ್ಮ ವಶ ನಾನು ಕೊಟ್ಟುದು ವ್ಯರ್ಥವಾಯಿತೆ? ಪರ ಮಾಶ್ಚರ್ಯ!

**ಪದ—ತ್ರಿವುಡೆ ತಾಳ.**

**ಮಾನಕತಿ ಚೋದ್ಯ ನಿನ್ನಯ ವಾರ್ತೆ—ನಿನ್ನಯ ವಾರ್ತೆ ॥ ಪ ॥**
**ಪ್ಲೇಗುದಳದ—ಅಮಿತಶಕ್ತಿ—ಅಡಗಿಪೋದುದೆಂತು ॥ ೧ ॥**
**ಸೃಷ್ಟಿನಾಶ—ಕಾರ್ಯವಿಂತು—ತಡೆದರೆಂತು ಪೇಳು ॥ ೨ ॥**

ಸರ್ವಸೇನಾಪತಿ:—ಮಹಾಪ್ರಭೋ, ಅದ್ಭುತಶಕ್ತಿಯ ದಳಗಳನ್ನು ನಮ್ಮ ವಶ ಕೊಟ್ಟಿರುವುದು ನಿಜ. ಎಷ್ಟರ ತನಕ ಮಾನವ ವರ್ಗಕ್ಕೆ ಈ ದಳಗಳ ಗೊತ್ತುಗುರಿಯಿಲ್ಲದೆ ಎಲ್ಲವೂ ಕಾಳಿಯ ಉಪದ್ರವವೆಂದು ಕುರಿ ಕೋಣಗಳನ್ನು ಬಲಿಕೊಡುವುದರಲ್ಲೇ ಅವರು ಮಗ್ನರಾಗಿದ್ದರೋ ಅಂದಿನ ತನಕ ನಮ್ಮ ಕಾರ್ಯವು ಬಹು ಸರಾಗವಾಗಿ ನಡೆಯುತಿತ್ತು. ಈಗಲಾದರೋ ಅವರು ಆ ದಾರಿಯನ್ನು ಬಿಟ್ಟು ನಮ್ಮ ದಳವನ್ನು ಕೊಲ್ಲುವುದರಲ್ಲೇ ನಿರತರಾಗಿದ್ದಾರೆ ನನ್ನ ಪ್ಲೇಗುದಳದ ಪ್ರಮುಖ ವಾಹನಗಳಾದ ಇಲಿಗಳನ್ನು ವಿಧವಿಧದಿಂದ ಕೊಲ್ಲುತ್ತಿರುವರು. ಗಣಪತಿಯ ವಾಹನವೆಂಬ ಆ ಅಭಿಮಾನವೂ ಈಗ ಅವರಿಗಿಲ್ಲ! ನಮ್ಮ ಬಾಧೆಯು ತಗಲಿದೆಯೆಂದು ಒಂದಿಷ್ಟು ಗೊತ್ತಾದರೆ ಸಾಕು, ಕೂಡಲೆ ಅಂಥವನನ್ನು ನಿರ್ಜನವಾದ ಪ್ರದೇಶದಲ್ಲಿಟ್ಟುಕೊಂಡು ಅನೇಕ ತರದ ಔಷಧಗಳನ್ನು ಕೊಟ್ಟು ಆತನ ದೇಹದಲ್ಲಿ ಹೊಕ್ಕಿದ್ದ ನನ್ನ ದಳವನ್ನು ನಾಶಪಡಿಸುವರು. ಒಂದು ವೇಳೆ ಆ ಹೋರಾಟದಲ್ಲಿ ನಾವು ಗೆದ್ದರೂ ನಮ್ಮ ಜಯವೂ ನಮ್ಮ ನಾಶವೂ ಏಕ ಕಾಲದಲ್ಲೇ ಆಗಿಹೋಗುವುದು.

ಯಮಧರ್ಮರಾಜ:—ಅದು ಹೇಗೆ?

ಸರ್ವಸೇನಾಪತಿ:—ನಾವು ಗೆದ್ದ ದೇಹದಲ್ಲಿ ನಮ್ಮ ದಳವು ಅಭಿವೃದ್ಧಿ ಹೊಂದಿ ಬೇರೆ ದೇಹಗಳಿಗೆ ಸೇರಬೇಕು. ಆದರೆ ಆ ನಿರ್ಜನವಾದ ಪ್ರದೇಶದಲ್ಲಿ ಯಾರಮೇಲೆ ಹಾರಲಿ? ಪಟ್ಟಣಕ್ಕೆ ಹಿಂತಿರುಗಿ ಓಡೋಣವೆಂದರೆ ವಾಹನವೆಲ್ಲಿಯದು? ಅದರಲ್ಲೂ ಬಿಸಿಲೆಂದರೆ ನಮ್ಮ ದಳವು ಸತ್ತೇ ಬಿದ್ದುಬಿಡುವುದು. ಆ ರೋಗಿಯ ಮೃತಶರೀರದಲ್ಲೋ ಬಟ್ಟೆಬರೆಗಳಲ್ಲೋ ಅಡಗಿದ್ದುಕೊಂಡು ಅನುಕೂಲವಾದಾಗ ಹೊರಡೋಣವೆಂದರೆ ಮರುಕ್ಷಣದಲ್ಲೇ ಆ ಮೃತ ಶರೀರದೊಡನೆ ಸುಣ್ಣಬೆರೆಸಿ ನಮ್ಮ ದಳಕ್ಕೂ

ಸಮಾಧಿಯಾಗಿಯೇ ಬಿಡುವುದು ಪಟ್ಟಣದಲ್ಲೆಲ್ಲಾದರೂ ನಾವು ಪಿಜಯಿ ಗಳಾದರೂ ಅಲ್ಲಿಯೂ ನಮ್ಮ ಅವಸ್ಥೆಯು ಇದೇ.

ಯಮಧರ್ಮರಾಜ:—ಅದು ಹೇಗೆ? ಒಂದು ದೇಶದಿಂದ ಮ ತ್ತೊಂದು ದೇಹಕ್ಕೆ, ಒಂದು ಮನೆಯಿಂದ ಮತ್ತೊಂದು ಮನೆಗೆ ಹಾರಲು ಅಲ್ಲಿಯೂ ಎಡೆಯಿಲ್ಲವೆ?

ಸರ್ವಸೇನಾಪತಿ:—ರೋಗಿಯ ಬಟ್ಟೆಬರೆಗಳಲ್ಲಿ ಅಡಗಿರೋಣವೆಂದರೆ ಪೂರ್ವಕಾಲದ ನಹುಗಮನದಂತೆ ನಮ್ಮ ದಳಕ್ಕೂ ಬಲತ್ಕಾರದ ಚಿತಾರೋ ಹಣವು ಆಗಿಯೇ ಬಿಡುವುದು. ಮನೆಯ ಸಂದುಗೊಂದು ಬಿರುಕುಗಳಲ್ಲಿ ಅಡಗಿದ್ದು ಬೇರೆಯವರ ಮೇಲೆ ಸಮಯ ನೋಡಿ ಹಾರೋಣವೆಂದರೆ ಅವ ರೆಲ್ಲ ಮನೆಬಿಟ್ಟು ಓಡಿಹೋಗುವರು ಪುನಃ ಹಿಂತಿರುಗಿ ಬರುವ ತನಕ ಕಾಯೋಣವೆ? ನಮ್ಮ ದಳಕ್ಕೆ ಕೇವಲ ವಿಷಪ್ರಾಯವಾದ ದ್ರಾವಕ ಗಳಿಂದ ಮನೆಯನ್ನೆಲ್ಲಾ ತೊಳೆದು ಗಂಧಕದ ಹೊಗೆಯೊತ್ತಿ ಸುಣ್ಣ ಬಳೆದು ತಾರು ಹಚ್ಚಿ ನಮ್ಮ ಒಂದು ಪಿಳ್ಳೆಯೂ ಉಳಿಯದಂತೆ ಮಾಡುವರು. ಇನ್ನು ಮನೆಯ ಹಿತ್ತಲಿನ ಕಸದ ರಾಶಿಯಲ್ಲಿಯಾದರೂ ಅಡಗಿರೋಣ ವೆಂದರೆ ಲಂಕಾಪಟ್ಟಣಕ್ಕೆ ಹನುಮಂತ ಬಂದಂತೆ ಅಲ್ಲಿಗೂ ಬಂದೇ ಬಿಡು ವರು! ನಮ್ಮ ದಳದ ಅಭಿವೃದ್ಧಿಗೆ ಕತ್ತಲೆ ಹಿತ, ಕಶ್ಮಲ ಹಿತ, ದೂಳು ಹಿತ, ನಮ್ಮ ಬಲಿಗೆ ಬಿದ್ದವನ ಹಾಗೂ ಅವನು ಉಪಯೋಗಿಸಿದ ವಸ್ತುಗಳ ಸಂಪರ್ಕವನ್ನು ಜನರು ಮಾಡಿದಷ್ಟು ಹಿತ; ಆದರೆ ಇವಕ್ಕೆಲ್ಲ ಒಂದಿಷ್ಟಾ ದರೂ ಎಡೆಗೊಡಬಾರದೆಂದು ಆರೋಗ್ಯಪ್ರತಾಪನ ಸೇನೆಯು ಪ್ರತಿ ಯೊಂದು ಮನೆಗೂ ಹೋಗಿ ಪದೇಪದೇ ಸಾರುತ್ತಿರುವುದು. ಅಲ್ಲದೆ ನಮ್ಮ ದಳಕ್ಕೆ ವಿಷಪ್ರಾಯವಾದ ಸೂರ್ಯನ ಬೆಳಕು, ಶುದ್ಧ ವಾಯು, ನಿರ್ಮಲವಾದ ನೀರು ಇವೆಲ್ಲ ಮನೆಮನೆಗೂ ಸಿಕ್ಕುವಂತೆ town planning, house building, water supply ಎಂಬ ಹೊಸಹೊಸ ಕ್ರಮ ಗಳನ್ನು ರೂಢಿಗೆ ತರುತ್ತಿರುವರು. ಮೊದಮೊದಲು ನನ್ನ ಈ ಪ್ಲೇಗುದಳದ ಬಾಯಿಗೆ ವಾರಕ್ಕೆ ಸಾವಿರಾರು ಜನರು ತುತ್ತಾಗುತ್ತಿದ್ದರು. ಈಗಲೋ ಒಂದೆರಡು ಸಿಗುವುದೂ ಪ್ರಯಾಸವಾಗಿದೆ, ಮಹಾಸ್ವಾಮಿ! ಆದುದ

ರಿಂದಲೇ ಹೇಳುವೆನು—ನನ್ನ ಈ ಸೇನಾಧಿಪತ್ಯಕ್ಕೆ ರಾಜೀನಾಮೆ ಕೊಡು ವೆನೆಂದು. ನಾವು ನಮ್ಮ ಕಾರ್ಯದಲ್ಲಿ ನಿರುತ್ಸಾಹಿಗಳಾಗಿರುವೆವೆಂಬ ಆರೋಪಣೆಗೇಕೆ ವೃಥಾ ಗುರಿಯಾಗಬೇಕು, ಮಹಾರಾಜ್!

ಯಮಧರ್ಮರಾಜ:—ಅಷ್ಟೊಂದು ಹತಾಶನಾಗಬೇಡ.

ಪದ—ದುಮಾಳಿ ತಾಳ.

ಮಂತ್ರಿವರ್ಯನೆ—ಶಾಂತತೆ ತಾಳ್ಳೈ । ಯೋಚಿಸಿ ಪೇಳುವೆನ್ನೈ ।
ವಿಘ್ನಗಳ್ಯಾವುವು—ಇತರರಿಗಿಹುದ್ನೈ— । ನಮ್ಮಯ ಕಾರ್ಯಕೆ ಹಾನಿಗಳೇನ್ನೈ ॥

ಇನ್ನುಳಿದವರ ಸಂಕಷ್ಟಗಳನ್ನು ಕೇಳಿ ಏನಾದರೊಂದು ಸಿರ್ಧಾರವಮಾಡೋಣ; ಸಮಾಧಾನವನ್ನು ತಾಳು.

ಕೊಲೆರಾ ಸೇನಾಪತಿ:—ಇನ್ನುಳಿದವರ ಸಂಕಷ್ಟಗಳನ್ನು ನಾನೇ ಹೇಳುವೆನು—ನನಗೆ ಈ ಕೊಲೆರಾ ದಳವನ್ನು ವಹಿಸಿರುವಿರಿ; ನನ್ನ ದಳವೇ ಆಗಲಿ ಇತರರ ದಳವೇ ಆಗಲಿ, ಅವುಗಳ ಹಾನಿ ವೃದ್ಧಿಗಳ ಕಾರಣಗಳು ಹೆಚ್ಚಿನ ಮಟ್ಟಿಗೆ ಒಂದೇ ತೆರನಾಗಿರುವವು. ನನ್ನ ಈ ಕೊಲೆರಾ ದಳವು ಕುಡಿಯುವ ನೀರು, ತಿನ್ನುವ ಆಹಾರ ಇವುಗಳ ಮೂಲಕ ಮನುಷ್ಯನ ಕರುಳನ್ನು ಸೇರಿ ಅದನ್ನು ನಾಶಪಡಿಸಿ ಅದರಿಂದ ಅಭಿವೃದ್ಧಿ ಹೊಂದಿ ಹೊರಬಿದ್ದು ಪುನಃ ನೀರು ಆಹಾರಗಳ ಮೂಲಕ ಮತ್ತೊಂದು ದೇಹವನ್ನು ಸೇರಬೇಕೆಂಬುದೇ ತಮ್ಮ ನಿಯಮ. ಆದರೆ ನನ್ನ ಈ ಸೈನ್ಯವು ಎಲ್ಲಾದರೂ ತಲೆಯೆತ್ತಿತೆಂದರೆ, ಎಲ್ಲಾದರೂ ಒಂದೇ ಒಂದು ನರಾಹುತಿಗೊಂಡಿ ತೆಂದರೆ, ಆ ಆರೋಗ್ಯಪ್ರತಾಪನ ಕಡೆಯವರ ತಂಡತಂಡವೇ ಅಲ್ಲಿಗೆ ಬಂದು—

ಪದ—ದಾದರ ತಾಳ.

ರೋಷದಿ ಬರ್ಪರ್ರೈ । ನಾಶವ ಮಾಳ್ಪರ್ರೈ ।
ಕಲಡಿಸೀರೊಳ್ಳೈ । ಔಷಧಗಳನ್ನೈ ।
ಬಹಳ ರೀತಿಯೊಳ್ । ಸಾರುತ ನಾಡಿನೊಳ್ ।
ಹಾನಿಯ ಕ್ರಮವನ್ನೈ । ಯೋನದ ಪೇಳಲ್ಕೈ ॥

ಕುಡಿಯುವ ನೀರಿನ ಆಶ್ರಯಗಳಾದ ಕೆರೆಬಾವಿಗಳಲ್ಲೆಲ್ಲಾ ಒಂದು ಪುಡಿ ಯನ್ನು ಕಳಡಿಸುವರು. ಮರುಕ್ಷಣದಲ್ಲೆ ಅಲ್ಲಿ ಅಡಗಿಕೊಂಡಿದ್ದ ನಮ್ಮ ದಳವೇ ಸತ್ತುಬೀಳುವುದು! ನಮ್ಮ ಬಲೆಗೆ ಸಿಕ್ಕಿದವನ ದೇಹದಿಂದ ಹೊರ

ಬಿದ್ದು ಮನೆಯಲ್ಲಿದ್ದ ನೀರು, ಅನ್ನ, ಹಾಲು ಇವುಗಳೆಲ್ಲಾದರೂ ಅಡಗಿ ರೋಣವೆಂದರೆ ಅವುಗಳನ್ನೆಲ್ಲ ಚೆನ್ನಾಗಿ ಕುದಿಸಿ ಬೇಯಿಸಿ ಬಿಸಿಬಿಸಿಯಾಗಿ ರುವಾಗಲೇ ಉಪಯೋಗಿಸಿರೆಂದು ಊರಲ್ಲೆಲ್ಲ ಸಾರುತ್ತಾ ಬರುತ್ತಾರೆ. ಈ ರೀತಿ ಆ ಆರೋಗ್ಯಪ್ರತಾಪನ ದೆಸೆಯಿಂದ ಕಾಲವು ಕೆಟ್ಟದೆ ಮಹಾ ಸ್ವಾಮಿ, ಮೊದಲು ಇವರ ಸುಳಿವೇ ಇದ್ದಿಲ್ಲ; ಈಗಲಾದರೋ ಜನರು

**ಪದ—ತ್ರಿವಟಿ ತಾಳ.**

**ನಾಶಗೈವಾರು—ಹೊಯ್ವಾರು—ಕೋಪದಿ ।**
**ಅಶೇಷವಿಶೇಷ—ತೋಪದಿ ॥**
**ಸೋತುಹತಾಶಾ—ರಾಗಿ ಪೋದೆವು—ಭೀತಿಯೊಳಿದೆ ದಳವೈ ।**
**ಆಹಾರ ವಿಹಾರ ಕಾಣೆವು ॥ ೧ ॥**

ನಮ್ಮನ್ನು ಹುಡುಕಿಹುಡುಕಿ ಕೊಲ್ಲುವಂತೆ ಪ್ರೇರೇಪಿಸುತ್ತಿರುವರು. ಮೊದ ಲಾದರೋ ಜನರು ಹಾಗಿದ್ದಿಲ್ಲ. ಅಜ್ಞಾನದಲ್ಲಿ ಮುಳುಗಿದ್ದರು. ರೋಗಿ ಯು ಉಪಯೋಗಿಸಿದ ಬಟ್ಟೆಬರೆಗಳನ್ನೂ, ಪಾತ್ರೆಗಳನ್ನೂ ಮನೆಯವ ರೆಲ್ಲರೂ ಉಪಯೋಗಿಸುತ್ತಿದ್ದರು. ಊರಿನ ಕುಡಿಯುವ ಜಲಾಶಯಗಳಲ್ಲಿ ಅದ್ದಿ ತೊಳೆಯುತ್ತಿದ್ದರು. ನಮ್ಮ ಬಾಧೆ ಬಂತೆಂದರೆ ಏನೋ ದೈವದ ಪೆಟ್ಟೆಂದು ಮಂತ್ರವಾದಿಯ ಮನೆಗೆ ಓಡುತ್ತಿದ್ದರು. ಅವರು ಹಿಂತಿರುಗಿ ಬರುವಷ್ಟರಲ್ಲೆ ಮತ್ತಿಬ್ಬರನ್ನು ಮಲಗಿಸಿಬಿಡುತ್ತಿದ್ದೆವು. ಒಬ್ಬನನ್ನು ಸಮಾಧಿ ಮಾಡಿ ಬರುವಷ್ಟರಲ್ಲಿ ಮತ್ತಿಬ್ಬರನ್ನು ಸಿದ್ಧಪಡಿಸಿಕೊಡುತ್ತಿದ್ದೆವು. ನಮ್ಮ ದಳದ ಮರ್ಮವೇ ಅವರಿಗೆ ಗೊತ್ತಿಲ್ಲದಿದ್ದುದರಿಂದ ಅವರು ಮಾಡುತ್ತಿದ್ದು ದೆಲ್ಲವೂ ನಮ್ಮ ಸೈನ್ಯದ ಅಭಿವೃದ್ಧಿಗೆ ಸಹಾಯವೇ ಆಗುತ್ತಿತ್ತು. ಆದುದ ರಿಂದ ನಾವು ಊರುಊರನ್ನೇ ಪಾಳುಬೀಳಿಸಲು ಶಕ್ತರಾಗಿದ್ದೆವು. ಆಗ ನಮ್ಮ ಕಾಲ, ಈಗ ಅವರ ಕಾಲ; ನಮ್ಮದೇನೂ ಸಾಗುವುದಿಲ್ಲ. ಅವರ ಉಪಟಳವನ್ನು ಎಷ್ಟೆಂದು ಹೇಳಲಿ.

**ಜ್ವರ ಸೇನಾಪತಿ:**—ಮಹಾಪ್ರಭೊ! ನನ್ನ ವಶದಲ್ಲಿರುವ ಮಲೆಜ್ವರ ಸೇನಾಂಗ, ಕ್ಷಯಸೇನೆ, ಸನ್ನಿಪಾತ ಜ್ವರಸೇನೆ, ಬಾಣಂತಿ ಜ್ವರದ ದಳ, ಸಿಡುಬು ದಳ, ಇನ್‌ಫ್ಲುಯೆಂಜಾ ನಿಮೋನಿಯಾ ದಳಗಳು—ಇವುಗಳೆಲ್ಲವೂ ಅರ್ಧಕ್ಕಿಂತ ಮಿಕ್ಕಿ ನಾಶವಾಗಿ ಹೋದುವು. ಸೂಕ್ಷ್ಮದರ್ಶಕವೆಂಬ

ಅದೊಂದು ಕನ್ನಡಿಯಂತೆ! ಅವುಗಳಿಂದ ನಮ್ಮ ಈ ಸೂಕ್ಷ್ಮಾಕಾರದ ದಳಗಳನ್ನೂ ಅವುಗಳ ಜೀವನ ಮತ್ತು ವೃದ್ಧಿಕ್ಷಯ ಕ್ರಮಗಳನ್ನೂ ತಿಳಿದುಕೊಂಡು ನಮ್ಮ ದಳಗಳ ಅನುಭವವನ್ನೂ ನಾಶಮಾಡುವ ಕ್ರಮಗಳನ್ನೂ ಹಳ್ಳಿಪಳ್ಳಿಗಳಲ್ಲಿಯೂ ಸಾರುತ್ತಾ ಇದ್ದಾರೆ. ಇನ್ನೊಂದು ದಾಕಿನ ಕ್ರಮವಂತೆ. ಸಿಡುಬು ದಾಕು, ಕೊಲೆರಾ ದಾಕು, ಪ್ಲೇಗು ದಾಕು—! ಇವುಗಳನ್ನು ಹಾಕಿಸಿಕೊಂಡ ಮನುಷ್ಯನ ದೇಹವನ್ನು ನಮ್ಮ ದಳಗಳಿಗೆ ಪ್ರವೇಶಿಸುವುದಕ್ಕೇ ಆಗುವುದಿಲ್ಲ. ಒಂದು ವೇಳೆ ಪ್ರವೇಶಿಸಿದರೂ ಪ್ರಾಣಹಾನಿಯನ್ನುಂಟುಮಾಡುವ ಶಕ್ತಿಯುಂಟಾಗುವುದಿಲ್ಲ. ಮತ್ತೊಂದು ಇಂಜೆಕ್ಷನ್ ಕ್ರಮವಂತೆ! ಮಾನವ ಶರೀರದೊಳಗೆ ಹೊಕ್ಕ ನಮ್ಮ ದಳವನ್ನು ಕ್ಷಣಾರ್ಧದೊಳಗೆ ನಾಶಮಾಡಿ ದೇಹವನ್ನು ರಕ್ಷಿಸುವ ವಿಧಾನ! ಒಂದು ವೇಳೆ ಗಂಡಸರ ಅಜ್ಞಾನವು ಹೋಗಿದ್ದರೂ ಚಿಂತೆಯಿದ್ದಿಲ್ಲ; ಹೆಂಗುಸರು ಮಾತ್ರ ಮುಂಚಿನಂತೆಯೇ ಅಜ್ಞಾನಿಗಳಾಗುತ್ತಿದ್ದರೆ ನಮ್ಮ ಕಾರ್ಯವನ್ನು ಸರಾಗವಾಗಿ ನಡೆಸುತ್ತಿದ್ದೆವು. ಹೆಂಗುಸರ ಅಜ್ಞಾನವೆಂದರೆ ನಮಗೆ ಪರಮಾನ್ನದಂತೆ! ಹೆಂಗುಸರು ಮಕ್ಕಳೆಂದರೆ ನಮ್ಮ ಲೆಕ್ಕದಪಟ್ಟಿಗೆ ದಾಕಲಾದವರೆಂದೇ ಅರ್ಥ! ಇದನ್ನು ತಿಳಿದೇ ಇನ್ಸೂರೆನ್ಸ್ ಕಂಪೆನಿಗಳು ಈ ಎರಡು ವರ್ಗದ ಪ್ರಾಣಗಳಿಗೆ ಹೊಣೆಯಾಗಿ ನಿಲ್ಲುವುದೇ ಇಲ್ಲ. ಆದರೆ ಇತ್ತೀಚೆಗೆ ಹಳ್ಳಿಪಳ್ಳಿಯ ಹೆಣ್ಣುಪಿಳ್ಳೆಯೂ ಶಾಲೆಗೆ ಹೋಗತೊಡಗಿದೆ. ಶಾಲೆಗಳಲ್ಲಿ ಉಪಾಧ್ಯಾಯರುಗಳದೊಂದು ತಂಡ, ಹೊರಗೆ ಈ ಆರೋಗ್ಯಪ್ರತಾಪನ ಪ್ರಚಾರ ಮಂಡಳಿಯವರ ತಂಡವೇ ತಂಡ! ಇವರೆಲ್ಲ ಹೇಳಿಕೊಡುವುದು ನಮ್ಮ ದಳಗಳನ್ನು ಈ ರೀತಿಯಿಂದ ನಾಶಮಾಡಿರಿ—ಎಂದು. ಮೂರನೆಯದಾಗಿ ಪತ್ರಿಕೆಗಳು—ಇವುಗಳು ನಹ—ಕ್ಷಯ ನಿವಾರಣೆ, ಶಿಶು ಸಂರಕ್ಷಣೆ, ಗರ್ಭಿಣಿ ಪಾಲನೆ, ಬಾಣಂತಿ ಸಂರಕ್ಷಣೆ, ಆರೋಗ್ಯಜೀವನ ಕ್ರಮ, ಸರಳ ಜೀವನ ಕ್ರಮ, ಬ್ರಹ್ಮಚರ್ಯದ ಮಹತ್ವ ಇತ್ಯಾದಿ ಇತ್ಯಾದಿ ನಮ್ಮ ಕಾರ್ಯಕ್ಕೆ ವಿರುದ್ಧವಾದ ವಿಷಯಗಳನ್ನೇ ಎತ್ತಿ, ಪದೇಪದೇ ಬರೆದು ಅವರೂ ಪ್ರಚಾರ ಕಾರ್ಯವನ್ನು ಮಾಡತೊಡಗಿರುವರು. ತಮ್ಮ ಪ್ರಚಾರ ಕಾರ್ಯಕ್ಕೆ ತಕ್ಕಂತೆ ನಾಟಕಗಳನ್ನು ಬರೆಯಿಸಿ ಅಭಿನಯಿಸುವರು. ನಮ್ಮ ನಾಶಕ್ಕೂ ಆರೋಗ್ಯಾಭಿವೃದ್ಧಿಗೂ ಅನುಕೂಲವಾಗುವ ತರತರದ ಆರೋಗ್ಯ

ಗೀತೆ, ಜೋಗುಳ ಹಾಡು—ಮುಂತಾದ ಕವನಗಳನ್ನು ತೊಟ್ಟಿಲಿಂದೆದ್ದು ಬರುವ ಜೋಕ್ರಿಯೂ ಹಾಡತೊಡಗಿರುವುದು! ನಮ್ಮ ದಳದ ಸುರಾರಾಕ್ಷಸಿಯು ಪರವಶನಾಗಿ ಸುರೇಂದ್ರನೆಂಬೊಬ್ಬನು ಮಾಡಿದ ಭೀಕರ ಕೃತ್ಯವನ್ನು ನಾಟಕ ರೂಪವಾಗಿ ಹಳ್ಳಿಹಳ್ಳಿಗಳಲ್ಲಿ ಆಟ ತೋರಿಸಿ, ಸುರೆಯು ಮಾನವ ವೈರಿ ಎಂಬುದನ್ನು ಮುಂದಟ್ಟು ಮಾಡುತ್ತಿರುವರು. ಸಾಲದುದಕ್ಕೆ ವರ್ಷಂಪ್ರತಿ ಇದೊಂದು ವಾರವನ್ನು 'ಶಿಶುಸಪ್ತಾಹ' ಎಂದು ಆ ವಿಷಯದ ಜ್ಞಾನ ಪ್ರಚಾರಕ್ಕಾಗಿಯೇ ಮೀಸಲಾಗಿಟ್ಟುಕೊಂಡಿರುವರು. ಇವರ ಪ್ರಯತ್ನಗಳೆಲ್ಲ ಎಷ್ಟೋಮಟ್ಟಿಗೆ ಫಲಕಾರಿಯಾಗುತ್ತ ಬರುತ್ತಿವೆ. ಇವರೆಲ್ಲ ಇದೇ ರೀತಿ ಅವಿಶ್ರಾಂತವಾಗಿ ನಮ್ಮ ನಾಶದ ಕಾರ್ಯಗಳಲ್ಲೇ ಇನ್ನೂ ಕೆಲವು ವರ್ಷಗಳನ್ನು ಕಳೆದರೆ ಕೊನೆಗೆ ಬೀಜಕ್ಕಾದರೂ ನಮ್ಮ ದಳಗಳ ರೊಳೆಗಳು ಉಳಿಯಲಾಪವೇ ಎಂದು ನನಗೆ ಸಂದೇಹವಾಗುತ್ತಿದೆ, ಮಹಾಸ್ವಾಮಿ.

ಪದ—ಆದಿತಾಳ.

ವಿಪರೀತ ಹತಾಶೆಯಾದೆ । ಮಮಕಾರ್ಯಗಳಲಿನಾ । ನುಡಿವೆ ನಿಜವನಾ ।
ಸಹಿಸೆನಿದನುನಾ । ಸಹಿಸೆನಿದನುನಾ । ಸಹಿಸೆ ॥ ಪ ॥
ಮಮಸೇನೆಯಾ ಹಾನಿನಾಶ । ವನು ಪೇಳಲಾರೆನು ರಾಜ ॥ ೧ ॥

ಯಮಧರ್ಮರಾಜ:— ಸೇನಾಪತಿಗಳಿರಾ! ಹತಾಶರಾಗಬೇಡಿರಿ. ನಮ್ಮ ಸೇನೆಗಳ ರಹಸ್ಯವನ್ನು ಮಾನವರು ಕಂಡುಹಿಡಿದರೆಂಬುದನ್ನು ನಾನು ನಂಬುವುದಿಲ್ಲ. ನಾವು ಹಾಕಿದ ಗಂಟನ್ನು ನಮ್ಮಂತೆಯೇ ಅಮರರಾದವರು ಬಿಡಿಸಬೇಕಲ್ಲದೆ ಮರ್ತ್ಯರಿಗೆ ತಾನೇ ಸಾಧ್ಯ? ಈಗ ನೀವು ಹೇಳುವ ಆ ಆರೋಗ್ಯಪ್ರತಾಪನ ವಿಷಯದಲ್ಲೇ ನನಗೆ ಸಂಶಯ ಉಂಟಾಗತೊಡಗಿದೆ. ಆ ಶ್ರೀಮನ್ನಾರಾಯಣನೇ ಏನೋ ಕುಚೇಷ್ಟೆಗೆ ಇಳಿದಿರಬೇಕು. ಆರೋಗ್ಯಪ್ರತಾಪನ ಮಂಡಳಿಯೆಂದರೆ ಆ ಮಾಯಾವಿಯಾದ ಹರಿಯ ನಾಟಕ ಮಂಡಳಿಯಲ್ಲದೆ ಮತ್ತೇನು?

ಪದ—ತ್ರಿವಟೆ ತಾಳ.

ಹರಿಯುವನ ಬಹುಮೋಸದಿಂದ । ವಿಶೇಷ ಭ್ರಾಂತರಾದಿರವನ
ಬಹುಮೋಸದಿಂದ ॥
ಮಾಯಾವಿಯೊ ತೆರದಿಯೆನ್ನಯ——ಸೇನೆಯಂ । ದಿಗಿಲು
ಗೊಳಿಸ—ಮಾಯಾಜಾಲ ವೇತಕೆ ಹರಡಿಪನೊ ।
ತಡೆಗಟ್ಟದಿರೆನು—ಪೋಗಿಯೀಗ ॥ ೧ ॥

ಆದರೆ ಆತನಿಗೆ ಆಟ! ನಿಮಗೆ ಪ್ರಾಣಸಂಕಟ! ಇರಲಿ, ನಾನೇ ಆತನ ಸಂದರ್ಶನವನ್ನು ಮಾಡಿ, ಇನ್ನಾದರೂ ಆತನ ಮರುಳಾಟವನ್ನು ಹಿಂತೆಗೆವಂತೆ ಹೇಳುವೆನು. ನೀವು ಧೈರ್ಯಗೊಂಡು ಭರತಭೂಮಿಗೆ ಹಿಂತೆರಳಿರಿ. ನಿಮ್ಮ ಕಾರ್ಯದಲ್ಲಿ ನಿರತರಾಗಿರಿ. ಆ ಆರೋಗ್ಯಪ್ರತಾಪನ ಕಡೆಯವರು ಎಷ್ಟು ಬೋಧನೆ ಕೊಟ್ಟರೂ ಮಾನವರು ಮಾನವರೇ. ಅವರಲ್ಲಿ ಹುಟ್ಟು ಗುಣಗಳಿಂದ, ಅಭ್ಯಾಸಬಲದಿಂದ, ಮೂಢಭಕ್ತಿ ಮೂಢಾಚಾರಗಳಿಂದ— ನೆಲೆನಿಂತ ಅನೇಕ ಜೀವನಕ್ರಮಗಳು ನಮಗೆಷ್ಟೋ ಅನುಕೂಲವಾಗಿಯೇ ಇವೆ. ಅವುಗಳೆಲ್ಲವೂ ಮಾಯವಾಗಲು ಇನ್ನೂ ಹಲವು ವರ್ಷಗಳು ಬೇಕು. ಕಸಾಯಿ ಅಂಗಡಿಗಳಲ್ಲಿ, ಹೋಟೆಲುಗಳಲ್ಲಿ, ವೇಶ್ಯಾಗೃಹಗಳಲ್ಲಿ ಸಂತೆಜಾತ್ರೆಗಳಲ್ಲಿ, ಈ ಸ್ಥಳಗಳಲ್ಲಿ ನೀವು ಎಷ್ಟೋ ಪ್ರಾಣನಾಶಮಾಡಬಹುದು. ಇಲ್ಲಿ ನಿಮ್ಮ ಬಲೆಗಳನ್ನು ಬೀಸಿ ಕಾದು ಕೂತುಕೊಳ್ಳಿ—ಆ ಮಾನವ ಮೃಗಗಳು ತಾವಾಗಿಯೇ ಬಂದುಬಂದು ಮೇಲೆಮೇಲೆ ಬೀಳುವವು. Hotels' cups and harlots' lips are such tempting places where men crowd like locusts inspite of all health lectures! Watch there, my dear generals, watch there day and night, and you can knockdown thousands in no time! ಅನೇಕರು ಹೆಲ್ತ್ ಲೆಕ್ಚರುಗಳನ್ನು ಕೇಳಿ ಕೇಳಿ ಕೊನೆಗೆ ನೆಟ್ಟಗೆ ಹೋಗುವುದು ಇಂತಹ ಸ್ಥಳಗಳಿಗೆ! ತಿಳಿಯಿತೆ? ಮರೆಯದಿರಿ. ನಾನೀಗಲೇ ವಿಷ್ಣುಲೋಕಕ್ಕೆ ಹೋಗಿ ನಮ್ಮ ಕಾರ್ಯವು ಸಾಂಗವಾಗುವಂತೆ ಮಾಡುವೆನು, ಧೈರ್ಯರಾಗಿರಿ.

ಪದ—(ಪ್ರೇಮಸೇವಾ . . . ಎಂಬಂತೆ) ಝಂಪೆತಾಳ.

ಪ್ರಿಯ ಮಂತ್ರಿವರರೆ ನಿಜಸಂಧಾನವ—ಮಾತೆ—ನಡೆವೆ—<br>
ನುಡಿವೆ—ನೀತಿಯಾ ವಿಷ್ಣುಗೆ ॥ ಮಮಕಾರ್ಯದಲಿ<br>
ಭಂಗ—ವಾಗೇಯಿಳಾ ಭಂಗ—ವೆರಥಾಮನಕ್ಲೇಶ<br>
ಪೇಳ್—ಎನುತುಸುರಿ ॥ ೧ ॥

(ಪರದೆಯು ಇಳಿಯುವುದು)

## ದೃಶ್ಯ ೩.—ಆರೋಗ್ಯ ಭಜನಾಮಂಡಳಿಯ ಮೆರವಣಿಗೆ.

ಪದ—ಮದಲಾಸಿ ಮಟ್ಟು—ಗೃಹಿಣೀ ಹಿತೋಪದೇಶ.

ಭಗಿನಿಯರಿದಕೇಳಿ ತೆಗಳಲು ಬೇಡಿ ।
ಸೊಗಸಿನ ಬಾಳ್ಕಿಗೆ ಮರುಳಾಗ ಬೇಡಿ ॥
ಕುಂದದು ಗೌರವ ಮನೆಗೆಲಸದಿಂದ ।
ಅಂದವಾಗ್ಪುದು ದೇಹ ಗೃಹಕೃತ್ಯದಿಂದ ॥ ೧ ॥
ಮೊಗತೊಳೆವ ನೀರಿಗೆ ದಾಸಿಯು ಬೇಕೆ? ।
ಪೋಗಲು ದೇಗುಲಕೆ ಮೋಟಾರುಯೇಕೆ? ॥
ಬಳಸದ ಕಬ್ಬಿಣ ಬಳಸದ ದೇಹ ।
ಗೆಲವಿಲ್ಲ ಕ್ಷಯಿಪವು ಇದು ನಿಸ್ಸಂದೇಹ ॥ ೨ ॥
ಹೆಂಗಳ ನಿರ್ಮಲ ಭೋಜನೊಳಿಲ್ಲ ।
ಅಂಗಳ ಕಂಡರೆ ತಿಳಿವುದು ಯೆಲ್ಲ ॥
ನಿರ್ಮಲದಂಗಳದೊಳು ನಗುತಿಹಳು ।
ನಿರ್ಮಲೆಯಾರೋಗ್ಯ ಲಕ್ಷ್ಮೀತಾನಿಹಳು ॥ ೩ ॥
ಜಿಡಗಿಗೆ ಮಾತ್ರವೆ ಮನಗೊಡುತಿರುವ ।
ಒಡಿಗೆಯ ಮನೆಯೊಳಃ ಮಲಿನತೆ ಬಿಡುವ ॥
ಮಡಿ ಮನೆಯೊಳಗೆಂದರೇನೆಂದು ನಗುವ ।
ಮಡದಿಯು ಸುಡುವಳು ಗೃಹಕೃತ ಸುಖವ ॥ ೪ ॥
ಚೊಕ್ಕಟವಿರೆ ಮನೆ ಕೆರೆಬಾವಿತೋಟ ।
ಸಂಕಟಬಾರದ ತೆರಗೈವ ಮಾಟ ॥
ಹಿತ್ತಲ ಕಸಕಡ್ಡಿ ಕೊಳಕಿನ ಜಾಗ ।
ಹುತ್ತವು ರೋಗಕ್ಕೆ ಸುಡಿರಪ್ಪ ಬೇಗ ॥ ೫ ॥
ಅಟ್ಟಿದ ಮುಚ್ಚದೆ ಯಿಟ್ಟರೆ ಪಾಪ ।
ಸಟ್ಟುಗ ತೊಳೆಯದೆ ಬಳಸಲು ಪಾಪ ॥
ನೀರಿನ ಮುಚ್ಚಳ ತೆಗೆದಿಡೆ ಪಾಪ ।
ನೀರೊಳು ಲೋಟೆಯ ಮುಳುಗಿಸೆ ಪಾಪ ॥ ೬ ॥
ಅಡಿಗೆಯ ಕೋಣೆಯು ನಿರ್ಮಲವಿರಲಿ ।
ಗಡಿಗೆಪಾತ್ರೆಗಳೊಳಮ್ಮ ವಿಮಲವಿರಲಿ ॥
ಗುಡಿಸಿದ ಕವಾಟ ಹಲಿಗೆಗಳಿರಲಿ ।
ಮಡಗಿರಿ ಬಳಕೆಯ ಪಾತ್ರೆಗಳಲ್ಲಿ ॥ ೭ ॥
ಕೈಯುಗುರು ಬೆಳೆಸಿಹಳ ಅಡುಗೆಯು ಬೇಡ ।
ಮೈಯನ್ನು ತುರಿಸಿಕೊಂಬವಳಡುಗೆ ಬೇಡ ॥
ಮೈಬೆವರು ಸುರಿಸುತ್ತ ಅಡುವವಳ್ಬೇಡ ।
ಕೈಯದ್ದಿ ಪಾಕಗೈವವಳೆಂದು ಬೇಡ ॥ ೮ ॥

## ದೃಶ್ಯ ೪.—ವೈಕುಂಠ ದೃಶ್ಯ. ಶ್ರೀಮನ್ನಾರಾಯಣ.

ದ್ವಾರಪಾಲಕ:—ದೇವಾಧಿದೇವ, ಯಮಧರ್ಮರಾಯರು ತಮ್ಮ ದರ್ಶನಾಪೇಕ್ಷೆಯಾಗಿ ಬಂದಿರುವರು.

ಶ್ರೀಮನ್ನಾರಾಯಣ:—(ಸ್ವಗತ) ಸರಿ, ನಾರದನ ಆರೋಗ್ಯಪ್ರಚಾರ ಕಾರ್ಯವು ಭರತಭೂಮಿಯಲ್ಲಿ ಬಹಳ ರಭಸದಿಂದ ನಡೆಯುತ್ತಿರಬೇಕು. ಯಮನೂ ಕಣ್ತೆರೆವಂತಾಯಿತು! ಈ ಪ್ರಸ್ತಾಪಕ್ಕಾಗಿಯೇ ಆತನು ಬಂದಿರಬೇಕು. (ಪ್ರಕಾಶವಾಗಿ) ಆತನನ್ನು ಸನ್ಮಾನಪೂರ್ವಕವಾಗಿ ಒಳಗೆ ಕರೆದುಕೊಂಡು ಬನ್ನಿರಿ. (ಯಮಧರ್ಮರಾಯನ ಪ್ರವೇಶ)

ನಾರಾಯಣ:—ಧರ್ಮರಾಜ್, ಸುಸ್ವಾಗತ್!

ಪದ—(ಪುಷ್ಪಪರಾಗ . . . ಎಂಬಂತೆ) ದುಮಾಳಿ ತಾಳ.

ಧರ್ಮಸುರಾಜ—ಸುವಂದನ—ಸ್ವಾಗತ ॥ ಪ ॥
ಅಪರೂಪದಲಿ ದಯಮಾಡಿಹ—ಬಹಳ ವಿಶೇಷದ
ಕಾರ್ಯವಿದೇನೈ । ಸ್ನೇಹಬಳಕೆಯು ವ್ಯತ್ರಿಯೆ ॥ ೧ ॥
ಜಗದ ಸೌಖ್ಯವನು—ತೋರಿ ವಿಚಾರ—ಕಲಿಸೆ—
ನಿಲಿಸೆ—ನಾನಿಹೆ । ವಿಧಿಯ ನಿಯಮವಿದು—
ಗೆಳೆಯಭಾವದಿ ಯಿರುವುದು ಯೋಗ್ಯವು—ಸ್ವಾಗತ ॥ ೨ ॥

ಧರ್ಮರಾಜ್, ಅಪರೂಪದಲ್ಲಿ ದಯಮಾಡಿಸಿರುವೆ. ಬಹಳ ಸಂತೋಷ! ಇದು ಸ್ನೇಹಭಾವದ ಸಂದರ್ಶನವೆ? ಅಥವಾ ಏನಾದರೂ ಕಾರ್ಯಕಾರಣಗಳಿವೆಯೆ?

ಯಮ:—ದೇವಾ, ಪ್ರಪಂಚದ ಸೃಷ್ಟಿಸ್ಥಿತಿಲಯ ಕಾರ್ಯಗಳಲ್ಲಿ ಸ್ಥಿತಿಕಾರ್ಯಕ್ಕೆ ನೀನು ಹೇಗೋ, ಹಾಗೇ ಲಯಕಾರ್ಯಕ್ಕೆ ನಾನು ಅಧಿಪತಿಯಾಗಿರುವೆನು. ಸೃಷ್ಟಿಕಾರ್ಯದಿಂದ ಹೆಚ್ಚಿ ಹೋಗುತ್ತಿರುವ ಪ್ರಾಣಿವರ್ಗವನ್ನು ಆಯುರಾಯು ಪ್ರಮಾಣಕ್ಕೆ ತಕ್ಕಂತೆ ಇಳಿಸುವ ಸಂಹಾರಕಾರ್ಯವೇ ನನ್ನದಾಗಿದೆ.

ಪದ—(ಛಳಿಕೆಯಾ . . . ಎಂಬಂತೆ) ಝಂಪೆತಾಳ.

ಮಿಗುತಿಹ—ಜಗದಾ—ಸದಾ—ಭಾರ ವಿಮೋಚನೆಯಾ—
ಕಾರ್ಯವನ—ಗೈವೆ—ನಾ ಸದಾ—ತಡೆವುದು—ತರವೆ—ನ್ಯಾ
ಯಾ—ವಿಾರಿ—ನಡೆವುದಿದು—ಯೋಚಿಕೆಲ್ಲೈ ॥ ೧ ॥

ಭೂಲೋಕದಲ್ಲಿ ನಾನು ನನ್ನ ಕಾರ್ಯದಲ್ಲಿ ಪ್ರವರ್ತಿಸದೆ ಸಂತುಬಿಟ್ಟರೆ ಹುಟ್ಟಿದ ಪ್ರಾಣಿಗಳಿಗೆಲ್ಲ ನಿಲ್ಲುವುದಕ್ಕೂ ಸ್ಥಳವು ಸಾಲದೆ ಜೀವನಕ್ಕೆ ಆಹಾರವು ಇಲ್ಲದೆ ಎಂತಹ ಕಠಿಣವಾದ ಜೀವನ ಸಮಸ್ಯೆಯು ಒಂಮೊದಗೀತು! ಆದುದರಿಂದ ನಾನು ಪ್ರಪಂಚದ ಹಿತಕ್ಕಾಗಿಯೇ ಕೆಲಸಮಾಡುತ್ತಿರುವೆನೆಂಬುದು ವ್ಯಕ್ತವಲ್ಲವೆ? ಹೀಗಿರುತ್ತ ನೀನು ನಾರದಾದಿ ಋಷಿಗಳನ್ನೂ, ದೇವತೆಗಳನ್ನೂ ಭೂಲೋಕದಲ್ಲಿ ಜನ್ಮವೆತ್ತುವಂತೆ ಮಾಡಿ, ಅವರಿಂದ ನನ್ನ ಕಾರ್ಯಕ್ಕೆ ವಿಘ್ನವನ್ನು ತಂದೊಡ್ಡುತ್ತಿರುವೆ! ನನ್ನ ಅಖಿಳ ಸೇನಾಪತಿಗಳು ಬಂದು ಬೊಬ್ಬಿಡುತ್ತಿರುವರು. ಹೀಗೇಕೆ ಮಾಡುತ್ತಿರುವೆ? ಇನ್ನಾದರೂ ಅವರನ್ನು ಹಿಂದಕ್ಕೆ ಕರೆಯಬಾರದೆ?

ನಾರಾಯಣ:—ಯಮಧರ್ಮರಾಯ, ನಿನಗೂ ಈ ಭ್ರಾಂತಿ ಎಲ್ಲಿಂದ ಬಂತು? ಲಯಕಾರ್ಯಕ್ಕೆ ನೀನು ನಿಯಮಿಸಲ್ಪಟ್ಟಿರುವುದು ಯಾರಲ್ಲವೆನ್ನುವರು. ಆದರೆ—

**ಪದ—(ಧನಂಜಿಡಿದಸತಾ . . . ಎಂಬಂತೆ) ದುಮಾಳಿ ತಾಳ.**

**ತವಸೇನಾವಳಿ ತಾ—ಸದಾ ಹಾಸಿಯನು ಮೋದದಿ—**
**ಬಲು ವೋಸದಿ—ಗೈವುತಲೇ—ಇಹುದೀ ತೆರದಿ**
**ನ್ಯಾಯವದೇನೋ—ನಾಶಕಾರಿ ॥ ೧ ॥**

ಆದರೆ ಇತ್ತೀಚೆಗೆ ನೀನು ನಿನ್ನ ಕಾರ್ಯದ ಮೇರೆಯನ್ನು ಮೀರಿ ಸ್ಥಿತಿ ಕಾರ್ಯಕ್ಕೆ ಭಂಗವನ್ನು ತರುತ್ತಿರುವೆಯೆಂಬುದನ್ನು ತಿಳಿದು ನನ್ನ ಸ್ಥಿತಿ ಕಾರ್ಯರಕ್ಷಣೆಗಾಗಿ ನನ್ನವರು ಅಲ್ಲಿ ಜನ್ಮವೆತ್ತುವಂತೆ ಮಾಡಿರುವೆನು. ಅಲ್ಲದೆ ನೀನು ಕೂಡ ನಿನ್ನ ಕರ್ತವ್ಯವನ್ನು ತಪ್ಪಾಗಿ ತಿಳಕೊಂಡು ನಿನ್ನ ಕಾರ್ಯದ ಮೇರೆಯನ್ನು ಮೀರಿ ವರ್ತಿಸುತ್ತಿದ್ದುದರಿಂದ ನಿನ್ನ ದಳದ ಉಪಟಳವನ್ನು ತಡೆಗಟ್ಟುವುದಕ್ಕಾಗಿ ನಾನು ಹೀಗೆ ಮಾಡಿರುವೆನು.

ಧರ್ಮರಾಜ:—ಏನು? ನಾನು ನನ್ನ ಕಾರ್ಯದ ಮೇರೆಯನ್ನು ಮೀರಿರುವೆನೆ? ಭೂಲೋಕದಲ್ಲಿ ಈಗ ಜನರು ಮಿತಸಂತತಿಯ ವಿಷಯ ವಿಶೇಷ ವಿಚಾರವನ್ನು ಮಾಡುತ್ತಿರುವುದೇ ನಿನ್ನ ಮಾತು ಸುಳ್ಳೆಂಬುದಕ್ಕೆ ನನ್ನ ಕಡೆಯ ಬಲವಾದ ಸಾಕ್ಷಿ! ನಾನು ಲಯಕಾರ್ಯದಲ್ಲಿ ಅಷ್ಟೊಂದು ಜಾಗ್ರತನಾಗಿಲ್ಲದಿದ್ದುದರಿಂದಲೇ ಸಂತತಿಯು ಮಿಗುವರಿಯಿತಲ್ಲವೆ? ಅದು ಕಾರಣ ಈಗ ಅವರೇ ಮಿತಸಂತತಿಯ ವಿಷಯ ಪ್ರಯತ್ನಮಾಡಬೇಕಾಗಿದೆ. ಹೀಗಿರುತ್ತ ನಾನು ನನ್ನ ಕಾರ್ಯದಲ್ಲಿ ಮಿಗುವರಿದೆನೆಂಬುದು ಎಂತಹ

ಮಾತು! ನ್ಯಾಯಾನ್ಯಾಯ ಸ್ಥಾಪನೆಗೆ ನಾನು ಅಧಿಕಾರಿಯಾಗಿರುತ್ತ ನಾನು ನನ್ನ ಕರ್ತವ್ಯವನ್ನು ತಪ್ಪಾಗಿ ತಿಳಿದಿರುವೆನೆ?

ಪದ—(ಶಿಶುಪಾಲನೇಪಾಲ . . . ಎಂಬಂತೆ)

ಸರಿಯಾದುದೆ ಮಾತು ನಾನರಿಯನೆ ಹಾನ್ಯಾಯ! ||
ಕುಮತಿಯಹೆನೆ—ಜಗದನ್ಯಾಯ ಸ್ಥಾಪನಾಕಾರಿ |
ಧರ್ಮ ಮೂರುತಿ ನಾ ನೆಂಬುದು ಲೋಕ—
ನ್ಯಾಯವರಿಯೆನೆ ನಾನು || ೧ ||

ನಾರಾಯಣ:—ಧರ್ಮರಾಜ, ಯೋಚಿಸಿ ನೋಡು; ಸೃಷ್ಟಿ ಸ್ಥಿತಿ ಕಾರ್ಯಗಳು ಸಾಂಗವಾಗಿ ನಡೆಯುವಂತೆ ಕೆಲವು ನಿಯಮಗಳಿವೆ ಅವು ಗಳಿಗನುಸಾರವಾಗಿ ಪ್ರತಿಯೊಬ್ಬ ಮಾನವನೂ ನಡೆದುಕೊಂಡು ಸ್ಥಿತಿ ಕಾರ್ಯವು ಸಂಪೂರ್ಣವಾದ ಮೇಲೆ ಆತನ ಲಯಕಾರ್ಯವು ನಿನ್ನಿಂದಾಗ ತಕ್ಕದ್ದು. ಅಲ್ಲದೆ ಸೃಷ್ಟಿ ಸ್ಥಿತಿಕಾರ್ಯಗಳಿಗೆ ವಿರುದ್ಧವಾಗಿ ನಡೆದವರಿಗೆ ರೋಗರೂಪವಾಗಿ ಶಿಕ್ಷಿಸುವುದೂ ನಿನ್ನ ಕೆಲಸವೇ

ಯಮ:—ನಾನು ಮಾಡುವ ಕೆಲಸವೂ ಅಷ್ಟೆ! ನನ್ನ ತಪ್ಪೆಲ್ಲಿದೆ? ನಾನು ನನ್ನ ಕರ್ತವ್ಯವನ್ನು ಮಾಡುತ್ತಿರುವಲ್ಲಿ ನೀನೇಕೆ ನನ್ನ ದಾರಿಗೆ ಅಡ್ಡ ಬರುತ್ತಿರುವೆ?

ನಾರಾಯಣ:—ಜನರು ಅಜ್ಞಾನವಶರಾಗಿ ಮಾಡಿದ ಅತ್ಯಲ್ಪ ತಪ್ಪಿಗೂ ಇತ್ತೀಚಿಗೆ ನಿನ್ನ ಜನರು ಮರಣದಂಡನೆಯನ್ನೇ ವಿಧಿಸುತ್ತಾ ಬರುತ್ತಾರೆ. ಬರಬರುತ್ತ ನಿನ್ನವರೀಗೆ ಅದೊಂದು ವಿನೋದವಾಗಿ ಪರಿಣಮಿ ಸಿರುವುದು. ಅವರು ಎಲ್ಲೆಲ್ಲಿಯೂ ಹೊಂಚುಹಾಕುತ್ತಿದ್ದು ಆರೋಗ್ಯ ನಿಯಮಗಳನ್ನು ಯಾರಾದರೂ ಒಂದಿಷ್ಟು ಮೀರಿ ನಡೆದರೆ ಕೂಡಲೆ ಶಿಕ್ಷಾ ರೂಪವಾಗಿ ಭಯಂಕರ ರೋಗಗಳನ್ನು ತಂದೊಡ್ಡುತ್ತಿರುವರು. ಕೊನೆಗೆ ಅಕಾಲ ಮರಣವೇ ಅಂತಹ ಶಿಕ್ಷೆಯ ಪರಿಣಾಮವಾಗಿದೆ. ಹಾಗೆ ಎಲ್ಲರೂ ನಿನ್ನ ದಳದವರಿಂದ ಮರಣ ಶಿಕ್ಷೆಯನ್ನೇ ಹೊಂದುತ್ತಾ ಬಂದರೆ ಸೃಷ್ಟಿ ಸ್ಥಿತಿಕಾರ್ಯಗಳಾದರೂ ನಡೆವುದು ಹೇಗೆ? ಆದುದರಿಂದ ಶರೀರ ಧರ್ಮ ಶಾಸ್ತ್ರ, ಆರೋಗ್ಯಶಾಸ್ತ್ರ ಇವುಗಳನ್ನೆಲ್ಲಾ ಮಾನವರಿಗೆ ತಿಳುಹಿಸಿ, ಅವು ಗಳ ನಿಯಮಗಳನ್ನು ಮೀರಿದವರಿಗೆ ರೋಗರೂಪವಾಗಿ ಎಂತೆಂತಹ ಭಯಂಕರ ರೋಗಗಳು ಬರುವುವೆಂದೂ, ಅವುಗಳಿಂದ ಹೇಗೆ ದೂರವಾಗಿರ ಬೇಕೆಂದೂ ಮಾನವ ವರ್ಗಕ್ಕೆ ಬೋಧಿಸುವುದಕ್ಕಾಗಿಯೇ ನಾನು ನಾರದ

ನನ್ನು ಭೂಲೋಕಕ್ಕೆ ಕಳುಹಿಸಿರುವುದೇನೋ ನಿಜ. ಅವನು 'ಆರೋಗ್ಯ ಪ್ರತಾಪ'ನೆಂಬ ಹೆಸರಿಂದ ಭರತಭೂಮಿಯಲ್ಲಿ ಅವತರಿಸಿರುವನು. ಅಲ್ಲದೆ ಈ ಉದ್ದೇಶ ಸಾಧನೆಗಾಗಿಯೇ ಅನೇಕ ದೇವರ್ಷಿಗಳೂ, ದೇವತೆಗಳೂ ಅಲ್ಲಿ ಅವತರಿಸಿರುವರು ಅವರು ನನ್ನ ಅನುಜ್ಞೆಯಂತೆ ಆರೋಗ್ಯ ಜೀವನದ ನಿಯಮಗಳನ್ನು ಜನಗಳಿಗೆ ಬೋಧಿಸಿ, ಅವುಗಳನ್ನು ಮೀರಿ ನಡೆಯಬಾರದೆಂದು ಆಗಾಗ ಎಚ್ಚರಿಸುತ್ತಿರುವರು. ತಿಳಿತಿಳಿದೂ ಅವರವುಗಳನ್ನು ಮೀರಿ ನಡೆದರೆ ಅವರೂ ಇರುವರು—ನೀನೂ ಇರುವೆ. ಆ ನಡುವೆ ನಾನಾಗಲೀ ನನ್ನವರಾಗಲೀ ಪ್ರವೇಶಿಸುವುದಿಲ್ಲ. ನಮ್ಮವರದು ಬರೇ ಆರೋಗ್ಯ ಜ್ಞಾನ ಪ್ರಚಾರಕಾರ್ಯ; ಕೇವಲ ಸೃಷ್ಟಿಸ್ಥಿತಿ ರಕ್ಷಣಾಕಾರ್ಯ! ಆದರೆ ಜನರ ಅಜ್ಞಾನವನ್ನು ನಿನ್ನವರು ಪರಮಾನ್ನವೆಂದು ಭಾವಿಸಿಕೊಂಡು ಅಕಾಲ ಮರಣವನ್ನೇ ವಿಧಿಸುತ್ತ ಸೃಷ್ಟಿಸ್ಥಿತಿ ಕಾರ್ಯಗಳಿಗೆ ವಿಘ್ನವನ್ನುಂಟುಮಾಡಲಿಕ್ಕಾಗಿ ಎಲ್ಲಿ ಅನ್ಯಾಯವಾಗಿ ಜನರ ಮೇಲೆ ಬೀಳಲು ಬರುವರೋ ಅಲ್ಲಿ ನಿಮ್ಮನ್ನು ವಿಜಯಿಗಳಾಗಲು ನಮ್ಮವರೆಂದೂ ಬಿಡರು. ಅಂತಹ ಪ್ರದೇಶದಲ್ಲೆಲ್ಲ ಆರೋಗ್ಯಪ್ರತಾಪನಿಗೆ ದಿಗ್ವಿಜಯ! ಆದುದರಿಂದ ನಿನ್ನ ಈ ದುರಭಿಪ್ರಾಯವನ್ನು ಬಿಟ್ಟು, ನ್ಯಾಯಮಾರ್ಗದಲ್ಲಿ ನಿನ್ನ ಕರ್ತವ್ಯ ನಿರ್ವಾಹವನ್ನು ಮಾಡುತ್ತಿರು ಅದಕ್ಕಾರೂ ಅಡ್ಡ ಬರುವಂತಿಲ್ಲ.

ಪದ—(ಮಹಾವಿಹಾರ . . . ಎಂಬಂತೆ) ರಾಗ-ವಸಂತ—ಆದಿತಾಳ.

ಮಹಾವಿರೋಧ ಸಂವಾ . . . ದ ॥ ಮನಕ್ಲೇಶವ ನೀಡಾಡಿದೂ<br>
ಡಿಬಿಡು ॥ ಮೇರೆಯೊಳಿಡುತ — ನಾಶಕಾರ್ಯವನು — ನ್ಯಾಯ<br>
ಗತಿಯನು ಮೀರದೆ — ಈ ॥ ಮಹಾ ವಿರೋಧ . . . ॥

---

ಮಂಗಲ— (ಶ್ರೀಹರಿನವವರ ಕೌಸ್ತುಭ . . . ಎಂಬಂತೆ) ರಾಗ-ಕಲ್ಯಾಣಿ—ರೂಪಕ.

ಶ್ರೀವರನರಹರಿ ಮಂಗಲವನು ಯಾಯೋದಯ । ಸಾರನೆ<br>
ಸುರವರನುತ ಮಹಿಮಾಲೋಲ ॥ ರಮಾನಾಥ ಭಜಕನಾಥ ।<br>
ನತಜನವರದಾಸುನಾಥ । ಶಾಂತಿಕಾಂತಿ ಪ್ರೀತಿಯುತ ॥ ೧ ॥<br>
ಸುಖಂದಾತ—ನಿಖಿಲನಾಥ । ಜಯಜಯ ಕರುಣಾವಿದಾತ ।<br>
ಶ್ರೀವಿಲೋಲ ಮಾರಪಿತ ॥ ದಯಾಸಾರ ಜಗದಾಧಾರ । ಸುಜನ<br>
ಜನಮನೋ ವಿಹಾರ । ನಮೋರಮೇಶ ಈಶ ಪೊರೆ ॥ ೨ ॥

ಸಂಪೂರ್ಣಂ

# ಶೋಧನಪತ್ರ

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| ೧ | ಪದ | ಮನವಾಸ | ಮನೋವಾಸ |
| ,, | ,, | ಕರುಣಸಾಗರ | ಕರುಣಾಸಾಗರು |
| ೨ | ೧ | ಭಾರತೇಯರ | ಭಾರತೀಯರ |
| ೩ | ೩ | ಕಳಕೊಂಡು | ಕಳೆದುಕೊಂಡು |
| ೩ | ೧ | ದೇಹದಾರ್ಢ್ಯತೆಯನ್ನು | ದೇಹದಾರ್ಢ್ಯವನ್ನು |
| ೩ | ೪ | ಮನೋಶಕ್ತಿಗೆ | ಮನಶ್ಶಕ್ತಿಗೆ |
| ೩ | ೧೩ | ಕೂತು* | ಕುಳಿತು |
| ೩ | ೧೬ | ಸಂಕಷ್ಟಕ್ಕೆ | ಸಂಕಟಕ್ಕೆ |
| ೩ | ಪದ | ಯತುನ | ಯತನ |
| ೪ | ೫ | ಜಿಗುಪ್ಸೆ | ಜುಗುಪ್ಸೆ |
| ೪ | ೯ | ಮಹತ್ಕಾರ್ಯ | ಮಹಾಕಾರ್ಯ |
| ೪ | ೧೩ | ವಿಷಯ* | ವಿಷಯವಾಗಿ |
| ೫ | ೧೫ | ಭಾರತಿಯು | ಭಾರತಮಾತೆಯು |
| ,, | ,, | ಹೀನದೆಶೆಯನ್ನು | ಹೀನದಶೆಯನ್ನು |
| ೬ | ೧ | ವಿಕ್ಕುಳಿಪವರಲ್ಲಿ | ಲೋಕದಲ್ಲಿ |
| ,, | ೩ | ಜಾಗೃತರಾಗು | ಜಾಗರೂಕರಾಗು |
| ,, | ೬ | ಹಿಡಕೊಂಡು* | ಹಿಡಿದುಕೊಂಡು |
| ,, | ೭ | ಮೆರವಣಿಗೆ* | ಮೆರೆವಣಿಗೆ |
| ೭ | ೧೦ | ನಿರಸ* | ನೀರಸ |
| ,, | ೨೪ | ಸ್ತನಪಾನ* | ಸ್ತನ್ಯಪಾನ |
| ೮ | ೧೪ | ಶ್ರಮಿಸೀ* | ಸಂಯಮಿಸೀ |
| ೯ | ಪದ | ನಡೀಗಲಿ | ನಡೆಯಿೂಗಲಿ |
| ೧೦ | ೧೮ | ಸರ್ರಿ | ಸರದಿ |
| ,, | ೨೬ | ಗೊತ್ತೇವುಂಟು | ಗೊತ್ತೇ ಉಂಟು |
| ೧೧ | ೨೧ | ಅಂಶವರಲಿ | ಅಂಶಹವರಲಿ |
| ೧೨ | ೪ | ಪಾಶಿ* | ಪಾಶ |
| ,, | ೫ | ರಾತ್ರೆ* | ರಾತ್ರಿ |
| ,, | ೧೩ | ಎಂತ* | ಎಂದು |

| | | | |
|---|---|---|---|
| ೧೨ | ೨೪ | ತಿಳಕೊಂಡರೆ* | ತಿಳಿದುಕೊಂಡರೆ |
| ೧೩ | ೫ | ಹೇಳುತ್ತಾರೆಂತ* | ಹೇಳುತ್ತಾರೆಂದು |
| ,, | ೧೩ | ಆಕರ್ಶಣೆ | ಆಕರ್ಷಣೆ |
| ,, | ೨೧ | ಚಿತ್ರಪಠ | ಚಿತ್ರಪಟ |
| ,, | ೨೦ | ಹೆಡ್ಡು ಹಂಗಸು | ಹೆಡ್ಡ ಹೆಂಗುಸು |
| ೧೬ | ೧೭ | ಬಾಗಲಲ್ಲೂ* | ಬಾಗಿಲಲ್ಲಿಯೂ |
| ೧೭ | ೪ | ನಿರೋಗಿ* | ನೀರೋಗಿ |
| ೧೮ | ೫ | ಬೊಗ್ಗಿತೆ | ಬೊಗ್ಗೀತೆ |
| ೧೯ | ಪದ | ದೂವುದ | ಧೂವುದ |
| ,, | ೧೭ | ತಕ್ಕೊಂಡು* | ತೆಗೆದುಕೊಂಡು |
| ೨೧ | ೭ | ಯಥೆಚ್ಛ | ಯಥೇಚ್ಛ |
| ೨೩ | ೧೫ | ಸ್ಮಶಾನ | ಶ್ಮಶಾನ |
| ೨೪ | ೩ | ಉಸುರು | ಉಸಿರು |
| ,, | ೯ | ಎಡೆ | ಎದೆ |
| ೨೫ | ೨೬ | ಬರದ್ದಾಗು | ಬರೆದುದಾಗು |
| ,, | ೧೯ | ಕಠಿಣ* | ಕಠಿನ |
| ೨೬ | ೧೧ | ನಿಮ್ಮಂತವರು | ನಿಮ್ಮಂತಿರುವವರು |
| ೨೯ | ೨ | ವಿವ್ಹಲ | ವಿಹ್ವಲ |
| ,, | ೫ | ಶ್ವಾಸೋಚ್ವಾಸ | ಶ್ವಾಸೋಚ್ಛ್ವಾಸ |
| ,, | ೬ | ನಾಲಿಗೆ* | ನಾಲಗೆ |
| ,, | ೮ | ಕಣ್ತರೆ* | ಕಣ್ದೆರೆ |
| ,, | ೧೧ | ನಾಡಿಪರೀಕ್ಷ* | ನಾಡೀ ಪರೀಕ್ಷೆ |
| ,, | ೧೯ | ಬಿಕ್ಷಾಟಣೆ | ಭಿಕ್ಷಾಟನೆ |
| ,, | ೨೬ | ಹುಚ್ಚು ಹಿಡಿದೆ | ಹುಚ್ಚು ಹಿಡಿದಿದೆ |
| ೩೦ | ದೃಶ್ಯ ೫ | ಮಧ್ಯಪಾನ | ಮದ್ಯಪಾನ |
| ,, | ,, | ದ್ವಿತೀಯವಸ್ಥೆ | ದ್ವಿತೀಯಾವಸ್ಥೆ |
| ೩೨ | ೩ | ಮಹಾತ್ಮ | ಮಹಾತ್ಮ್ಯ |
| ೩೩ | ೬ | ಯತಾರ್ಥ* | ಯಥಾರ್ಥ |
| ,, | ೭ | ಶ್ರದ್ದೆ* | ಶ್ರದ್ಧೆ |
| ,, | ೩ | ನಿತ್ತಲ್ಲಿಂದ | ನಿಂತಲ್ಲಿಂದ |
| | ೧೪ | ಕಷ್ಮಲ | ಕಶ್ಮಲ |

| | | | |
|---|---|---|---|
| ೩೩ | ೧೪ | ಸೇಕರಿಸಿ | ಸೇರಿ |
| ,, | ೨೦ | ಅವಶ್ಯಕತೆಯು | ಆವಶ್ಯಕತೆಯನ್ನು |
| ,, | ೨೧ | ಬಾಯಿಗೆ ಮದ್ದು | ಬಾಯಿಗೆ ಮುದ್ದು |
| ೩೫ | ೧೯ | ಚೆನ್ನಾಗಿದ್ದಿ | ಚೆನ್ನಾಗಿದ್ದೆ |
| ೩೬ | ೨ | ಆಗುವಿ | ಆಗುವೆ |
| ,, | ೩ | ಸರ್ವತಃ | ಸರ್ವಥಾ |
| ೩೮ | ೨೨ | ಎಲ್ಲಾ* | ಎಲ್ಲ |
| ,, | ೧೧ | ಸೂಳೆರ* | ಸೂಳೆಯರ |
| ೪೧ | ೨೨ | ವರೇಗೂ* | ವರೆಗೂ |
| ೪೨ | ೧೩ | ತಕ್ಕೊಂಡು* | ತೆಗೆದುಕೊಂಡು |
| ,, | ೨೪ | ಬಿಳೀ | ಬಿಳಿಯ |
| ೪೪ | ೧೭ | ಎಂತ* | ಎಂದು |
| ೪೬ | ೮ | ತಿಳೀತೆ* | ತಿಳಿಯಿತೆ |
| ೫೨ | ೧೭ | ಸತಂಭಟ್ಟ | ಸತ್ಯಂಭಟ್ಟ |
| ೫೩ | ೧೨ | ತಲಿಕಿರುಬುವನು | ತಲಿ ತುರಿಸಿಕೊಳ್ಳುವನು |
| ೫೬ | ೨ | ತೃಶಾ | ತೃಷಾ |
| ೬೦ | ೨೪ | ಸ್ವತಹ | ಸ್ವತಃ |
| ೬೭ | ೧೦ | ಹೊಕ್ಕಿದವಳ | ಹೊಕ್ಕವಳ |
| ೬೯ | ೧೭ | ಬ್ರಾಂತ | ಭ್ರಾಂತ |
| ೭೦ | ೯ | ತೀಕ್ಷಣ | ತೀಕ್ಷ್ಣ |
| ,, | ೧೧ | ಪತಿವೃತೆ | ಪತಿವ್ರತೆ |
| ,, | ೨೦ | ಬೀಳ್ಗೊಳ್ಳು | ಬೀಳ್ಕೊಳ್ಳು |
| ,, | ೨೧ | ದೇವತಾ ಸ್ವರೂಪಿ | ದೇವತಾ ಸ್ವರೂಪಿಣಿ |
| ೭೧ | ೪ | ವೇಧನೆ | ವೇದನೆ |
| ೭೨ | ೧೨ | ಪ್ರೀಯೆ | ಪ್ರಿಯೆ |
| ೭೫ | ೭ | ಅಮವಾಸೆಯು ರಾತ್ರೆ | ಅಮಾವಾಸ್ಯೆಯ ರಾತ್ರಿ |
| ೭೭ | ೨ | ರೋಗಿಷ್ಟ | ರೋಗಿಷ್ಠ |
| ೮೦ | ೯ | ಚಂಡಾಟ | ಚೆಂಡಾಟ |
| ೮೧ | ೫ | ಪಾಠಶಾಲೆಗಳಲ್ಲಿ | ಪಾಠಶಾಲೆಯಲ್ಲಿ |
| ೮೨ | ೧೩ | ಶೃತಪಡಿಸು | ಶ್ರುತಪಡಿಸು |
| ೮೫ | ೯ | ಭಾದೆ* | ಬಾಧೆ |

| | | | |
|---|---|---|---|
| ೮೬ | ೭ | ಬಲತ್ಕಾರ | ಬಲಾತ್ಕಾರ |
| ೮೭ | ೧೮ | ಕಲಡಿಸು | ಕದಡು |
| ೮೮ | ೧ | ಇವುಗಳೆಲ್ಲಾದರೂ | ಇವುಗಳಲ್ಲಾದರೂ |
| ೯೦ | ಪದ | ಹತಾಶಿಯಾದೆ | ಹತಾಶನಾದೆ |
| ೯೧ | ಪದ | ಮನಕ್ಲೇಶ* | ಮನಃಕ್ಲೇಶ |
| ೯೨ | ಪದ | ಬಾಳ್ಕಿಗಿ | ಬಾಳ್ಕೆಗೆ |
| ,, | ,, | ಅಂದವಾಗ್ವುದು | ಅಂದವಪ್ಪುದು |
| | ,, | ಹಲಿಗೆ | ಹಲಗೆ |
| ೯೩ | ೯ | ಧರ್ಮರಾಜ್ | ಧರ್ಮರಾಜ |
| ,, | ,, | ಸುಸ್ವಾಗತ್ | ಸುಸ್ವಾಗತ |
| ೯೫ | ೧೩ | ಬರಬರುತ್ತ | ಬರುಬರುತ್ತ |
| ೯೬ | ಪದ | ಮಹಾವಿರೋದ | ಮಹಾವಿರೋಧ |
| ,, | ,, | ದಯಸಾರನೆ | ದಯಾಸಾರನೆ |

*ಬೇರೆ ಕಡೆಗಳಲ್ಲಿಯೂ ಕಾಣಬರುವ ಈ ತಪ್ಪುಗಳನ್ನು ತಿದ್ದಿಕೊಳ್ಳುವುದು.

ವಿ. ಸೂ. ಪದಗಳನ್ನು ಹಾಡುವ ರೀತಿಯನ್ನು ಸಾಧ್ಯವಿದ್ದಷ್ಟು ತೋರಿಸುವುದಕ್ಕಾಗಿ ಹ್ರಸ್ವಗಳನ್ನು ದೀರ್ಘವಾಗಿಯೂ, ತಾಳದ ಗತಿಯನ್ನು ಸೂಚಿಸುವುದಕ್ಕಾಗಿ ಶಬ್ದಗಳನ್ನು ಬಿಡಿಸಬಾರದ ಕಡೆಗಳಲ್ಲಿ ಬಿಡಿಸಿಯೂ, ಅಲ್ಲಲ್ಲಿ ಅಡ್ಡಗೆರೆ — ಹಾಕಿಯೂ ಬರೆದುದುಂಟು.

BOARD HIGH SCHOOL, UDIPI,
SOUTH KANARA,

C. No. 48 25. *Dated 24th February 1925.*

*From,*

**M. R. Ry. S. Subba Rao. Avl,** B.A., L.T.,

*Head-master, Board High School,*

UDIPI.

*To,*

**The President, District Board,**

SOUTH KANARA.

*Through,*

**The District Educational Officer,**

SOUTH KANARA.

SIR,

In enclosing herewith a copy of the Report and Prize list in connection with the 3rd School-Day Anniversary celebrated on the 14th instant, I beg to state that the public of Udipi liberally contributed with the express suggestion to present a Gold Medal to M. R. Ry. Kordcal Srinivasa Rao in appreciation of his services to render the last three School Day functions, a success. Accordingly the School Day Managing Committee resolved on 26-2-'25 to present a Gold Medal weighing five sovereigns and to approach

you for favour of sanction the award of the medal to M, R. Ry. Kordcal Srinivasa Rao.

Under the above circumstances I beg to request you to be pleased to accord your sanction at an early date,

I beg to remain,

Sir,

Your most obedient servant

(*Sd.*) **S. Subba Rao,**

*Head-master.*

N. DIS 433/25/26-2-25.

Forwarded and recommended.

(*Sd.*) **K. Sankara Menon,**

*Dt. Educational Officer, S. Kanara.*

N. DIS No. 855 DB/25.

**Returned to the Head-master,**

BOARD HIGH SCHOOL, UDIPI.

His assistant M. R. Ry. K. Srinivasa Rao is premitted to accept a Gold Medal.

MANGALORE, 4-3-1925.

(*Sd.*) **N. Subba Rao,**

*President, District Board.*

Copy communicated to M. R. Ry. K. Srinivasa Rao for information.

BOARD HIGH SCHOOL, *Udipi. 16-4-'25.*

(*Sd*) **S. Subba Rao,**

*Head-master.*

S. KANARA DT. BOARD OFFICE.
*Mangalore, 28—1—'26.*

DIS NO. 81 D/DB. 26.

*From,*

**M R. Ry. Rao-Bhadur N. Subba Rao, Avl.,**

*President District Board, South Kanara,*

*To*

**The Joint Secretary,**

NATIONAL HEALTH & BABY WEEK ASSOCIATION, UDIPI.

*Ref. Your letter dated 26-1-'26.*

SIR,

I have the honour to accord sanction for the presentation of a Gold Medal to M. R. Ry. K. Srinivasa Rao, Assistant, Board High School, Udipi, in consideration of his services rendered to your association.

I have the honour to be
Sir,
Your most obedient servent.

**N. Subba Rao,**
*President.*